# ಶ್ರೀರಾಮ ಇಟ್ಟಣ್ಣವರ ಕಾವ್ಯ ವಿವೇಚನೆ

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ಸಂಪ್ರಬಂಧ)

ಸಂಶೋಧಕರು :
**ಶ್ರೀಮತಿ ಎಂ. ವಾಯ್. ಪಾಟೀಲ**
ಎಸ್.ಎಲ್.ಆರ್.ಜಿ. ಪದವಿ ಕಾಲೇಜು,
ಗೋಕಾಕ ಜಿ. ಬೆಳಗಾವಿ

ಮಾರ್ಗದರ್ಶಕರು :
**ಡಾ. ವ್ಹಿ. ಎಸ್. ಮಾಳಿ**
ನಿರ್ದೇಶಕರು,
ಶ್ರೀ ಬಿ. ಆರ್. ದರೂರ
ಸಂಶೋಧನ ಕೇಂದ್ರ, ಹಾರೂಗೇರಿ ಜಿ. ಬೆಳಗಾವಿ




**ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,**
**ಹಾರೂಗೇರಿ ಜಿ. ಬೆಳಗಾವಿ**
: ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೮



252

# ಶ್ರೀರಾಮ ಇಟ್ಟಣ್ಣವರ ಕಾವ್ಯ ವಿವೇಚನೆ

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ಸಂಪ್ರಬಂಧ)

ಸಂಶೋಧಕರು :
**ಶ್ರೀಮತಿ ಎಂ. ವಾಯ್. ಪಾಟೀಲ**
ಎಸ್.ಎಲ್.ಆರ್.ಜಿ. ಪದವಿ ಕಾಲೇಜು,
ಗೋಕಾಕ ಜಿ. ಬೆಳಗಾವಿ



ಮಾರ್ಗದರ್ಶಕರು :
**ಡಾ. ವ್ಹಿ. ಎಸ್. ಮಾಳಿ**
ನಿರ್ದೇಶಕರು,
ಶ್ರೀ ಬಿ. ಆರ್. ದರೂರ
ಸಂಶೋಧನ ಕೇಂದ್ರ, ಹಾರೂಗೇರಿ ಜಿ. ಬೆಳಗಾವಿ






**ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,**
**ಹಾರೂಗೇರಿ ಜಿ. ಬೆಳಗಾವಿ**
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ
**೨೦೦೮**

# ಪ್ರಮಾಣ ಪತ್ರ

ಶ್ರೀರಾಮ ಇಟ್ಟಣ್ಣವರ ಕಾವ್ಯ ವಿವೇಚನೆ ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ. ವ್ಹಿ. ಎಸ್. ಮಾಳಿ ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ನಾನು ಪ್ರಕಟಿಸಿರುವುದಿಲ್ಲವೆಂದೂ ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೦೭–೦೯–೨೦೦೮

**ಶ್ರೀಮತಿ ಎಂ. ವಾಯ್. ಪಾಟೀಲ**
ಸಂಶೋಧನ ವಿದ್ಯಾರ್ಥಿ
ಶ್ರೀ ಬಿ.ಆರ್. ದರೂರ
ಸಂಶೋಧನ ಕೇಂದ್ರ, ಹಾರೂಗೇರಿ.

# ದೃಢೀಕರಣ ಪತ್ರ

ಶ್ರೀಮತಿ ಎಂ. ವಾಯ್. ಪಾಟೀಲ ಇವರು **ಶ್ರೀರಾಮ ಇಟ್ಟಣ್ಣವರ ಕಾವ್ಯ ವಿವೇಚನೆ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ **ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಇವರು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟಿಸಿಲ್ಲವೆಂದೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೦೭-೦೯-೨೦೦೮

**ಡಾ. ವ್ಹಿ. ಎಸ್. ಮಾಳಿ**
ನಿರ್ದೇಶಕರು,
ಶ್ರೀ ಬಿ.ಆರ್. ದರೂರ
ಸಂಶೋಧನ ಕೇಂದ್ರ, ಹಾರೂಗೇರಿ

# ಅರಿಕೆ

ಅದೊಂದು ಶುಭ ಮುಂಜಾವು. ಹೊತ್ತು ಮೂಡುವ ಮುನ್ನ ನನ್ನ ಸೆಲ್ ಹಾಡತೊಡಗಿತು. ಬೇಸರಿಸುತ್ತಲೇ ಎತ್ತಿಕೊಂಡು ನೋಡಿದೆ. ತುಂಟ ಗೆಳತಿ ಶೋಭಾ ಕರೆಮಾಡಿದ್ದಳು. ಯಾವಾಗಲೂ ಮಿಸಕಾಲ್ ಕೊಡುವ ಇವಳು ಇಂದೇಕೆ ರಿಯಲ್ ಕಾಲ್ ಮಾಡುತ್ತಿದ್ದಳು-ಸೋಜಿಗ! ಆತಂಕ!! ಕಿವಿ ಕೊಟ್ಟೆ. "ಏ, ನಂದಾ! ಎಂ.ಫಿಲ್. ಮಾಡೋಣೇನ್ಲೆ ? ಹಾರೂಗೇರಿಯೊಳಗ ಸಂಶೋಧನ ಕೇಂದ್ರ ಆಗೇದ. ನಮ್ ಮಾಳಿ ಸರ್'s ಅದಾರು". ಅವಳ ಧ್ವನಿ ನನ್ನೊಳಗೆ ನಿರಾಕಾರವಾಗಿದ್ದ ನನ್ನ ಅಧ್ಯಯನದ ಆಸಕ್ತಿಗೆ ಮೆಲ್ಲಮೆಲ್ಲನೆ ಆಕಾರ ನೀಡತೊಡಗಿತು. ಪ್ರೀತಿಯ ಗೆಳತಿಯ ಉತ್ಸಾಹಕ್ಕೆ ನನ್ನದೊಂದಿಷ್ಟು ಆಸಕ್ತಿ ಬೆರೆಸಿ ಪ್ರತಿಕ್ರಿಯಿಸಿದೆ. ಅದುವೇ ನಮ್ಮ ಎಂ.ಫಿಲ್. ಅಧ್ಯಯನ ಪಯಣದ ಶುಭಾರಂಭ.

ಪ್ರವೇಶ ಪಡೆಯುವುದು ಕಷ್ಟವಾಗಲಿಲ್ಲ. ಆದರೆ ಅಭ್ಯಾಸ-ವರ್ಗಗಳು ಪ್ರಾರಂಭವಾದಾಗ ಎಂ.ಫಿಲ್. ನಿಜ ಬಣ್ಣ ಬಯಲಾಗತೊಡಗಿತು. ಕಾಲೇಜಿನಲ್ಲಿ ಪಾಠ ಮುಗಿಸಿ, ಗೋಕಾಕದಿಂದ ಹಾರೂಗೇರಿಗೆ ಮಧ್ಯಾಹ್ನ ೨ ಗಂಟೆಗೆ ಸರಿಯಾಗಿ ಬರಬೇಕು. ತಡವಾದರೆ ನಿರ್ದೇಶಕರ ವಾಗ್ದಂಡನೆ. ಊಟಕ್ಕೂ ವೇಳೆ ಇರುತ್ತಿರಲಿಲ್ಲ. ಬಸ್ಸುಗಳಿಗೆ ಮಾತ್ರ ವೇಳೆಯೇ ತಿಳಿಯುತ್ತಿರಲಿಲ್ಲ. ಪರೀಕ್ಷೆ ಹತ್ತಿರವಾಗುತ್ತಿದ್ದಂತೆ ಮತ್ತೊಂದು ಭಯ ಕಾಡತೊಡಗಿತು. ವಿನೂತನ ಪಠ್ಯಕ್ರಮ ; ಪಠ್ಯಗಳೇ ಇಲ್ಲ. ಹೇಗೋ ಪರೀಕ್ಷೆ ಮುಗಿಯಿತು. ಪರಿಣಾಮ ಎರಡು ಪತ್ರಿಕೆಗಳ ಫಲಿತಾಂಶ ತಡೆಹಿಡಿಯಲಾಗಿತ್ತು. ಮತ್ತೆ ಮುದುರಿದೆ. ಸುದೈವಕ್ಕೆ ಮೂರನೇ ಮೌಲ್ಯಮಾಪನದಲ್ಲಿ ಅವೆರಡು ಪಾಸಾದವು. ಡಾ. ವ್ಹಿ. ಎಸ್. ಮಾಳಿಯವರ ಮಾರ್ಗದರ್ಶನದಲ್ಲಿ "ಶ್ರೀರಾಮ ಇಟ್ಟಣ್ಣವರ ಕಾವ್ಯ ವಿವೇಚನೆ"ಯ ಕುರಿತು ಸಂಪ್ರಬಂಧ ಬರೆಯಲು ಯೋಜಿಸಿ, ಆರಂಭಿಸಿದೆ. ಹತ್ತು ಪುಟಗಳಷ್ಟು ಬರೆದು ತೋರಿಸಿದಾಗ ಗುಣಿಸಿ, ಗುಣಿಸಿ, ಕಳೆದು ಒಂದು ಪುಟದಷ್ಟು ವಿಷಯ ಉಳಿಸಿಕೊಟ್ಟಾಗ ಬಾಣಲೆಯಿಂದ ಬೆಂಕಿಗೆ ಬಿದ್ದ ಅನುಭವ. ಡಾ. ಮಾಳಿ ಸರ್ ಅವರಲ್ಲಿಯ ಶೈಕ್ಷಣಿಕ ಶಿಸ್ತಿನೊಂದಿಗೆ ಇರುವ ಆತ್ಮೀಯತೆ ನನ್ನ ಅಧ್ಯಯನದ ಪ್ರೇರಕ ಶಕ್ತಿ.

ಡಾ. ಶ್ರೀ ರಾಮ ಇಟ್ಟಣ್ಣವರ ನನ್ನ ಪ್ರೀತಿಯ ಕವಿ. ಅವರ ಕಾವ್ಯದಲ್ಲಿರುವ ಪ್ರೀತಿಯನ್ನು ಅವರ ಬಳಗದ ಮಧ್ಯೆ ಅನುಭವಿಸಿದ ಭಾಗ್ಯ ನನ್ನದು. ಬೀಳಗಿಗೆ ಹೋದಾಗಲೊಮ್ಮೆ ಅವರ ಮನೆಯಲ್ಲಿ ಊಟ ಮಾಡಿಯೇ ಬರುವುದು ಕಡ್ಡಾಯವಾಗಿತ್ತು. ಬರುವಾಗ ಪ್ರತಿ ಸಲ ತಪ್ಪದೇ ಎಚ್ಚರಿಸುತ್ತಿದ್ದರು - "ಪಾಟೀಲರೆ, ಒಂದು ಮಾತು ನೆನಪಿಡಿ, ಅಧ್ಯಯನದಲ್ಲಿ ಶಿಸ್ತು ಮುಖ್ಯ ; ಸೌಜನ್ಯತೆಯಲ್ಲ." ಅವರ ಮಾತಿನ ಛಾಯೆ ನನ್ನ ಈ ಪ್ರಬಂಧದುದ್ದಕ್ಕೂ ಕಾಣುವುದು ನನಗೆ ಸಂತಸ ತಂದಿದೆ. ಹಾರೂಗೇರಿಯ ಶ್ರೀ ವೃಷಭೇಂದ್ರ ಕಾಲೇಜಿನ ಪ್ರಾಚಾರ್ಯ ಶ್ರೀ ಈರಣ್ಣ ಕೊಕಟನೂರ ನಮ್ಮ ಬಳಗದ ಬಂಧು. ಅವರ ಪತ್ನಿ ಶ್ರೀಮತಿ ಶಿವಲೀಲಾ ಅವರ ಪ್ರೀತಿ, ಅಕ್ಕ ಸುಮಾ ತೋರಿದ ಅಕ್ಕರತೆ, ಡಾ. ಮಾಳಿ ಸರ್ ಮನೆಯವರಾದ ಶೈಲಜಾ ಅವರ ಸರಳತೆ, ಡಾ. ಆರ್. ಬಿ. ಚಿಲಮಿಯವರ ಸೌಜನ್ಯತೆ ಸ್ಮರಣೀಯ.

ಗೋಕಾಕದ ಶ್ರೀ ಲಕ್ಷ್ಮೀ ಶಿಕ್ಷಣ ಟ್ರಸ್ಟಿನ ಅಧ್ಯಕ್ಷರಾದ ಮಾನ್ಯಶ್ರೀ ಡಾ. ಭೀಮಶಿ ಜಾರಕಿಹೊಳಿಯವರಿಗೆ ಹಾಗೂ ಪದವಿ ಕಾಲೇಜು ಪ್ರಾಚಾರ್ಯ ಎಸ್. ಎಸ್. ಉಪ್ಪಾರ ಅವರಿಗೆ ಮತ್ತು ನನ್ನೆಲ್ಲ ಸಹೋದ್ಯೋಗಿಗಳಿಗೆ ಋಣಿಯಾಗಿದ್ದೇನೆ. ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರದ ಗ್ರಂಥಾಲಯ ಸಿಬ್ಬಂದಿಯವರ ಸಹಾಯ, ಪ್ರಿಯಾ, ಮಮತಾ, ಪರಿಮಳಾ, ವೀಣಾ, ಮೀನಾಕ್ಷಿ ಮೊದಲಾದ ಎಲ್ಲ ಗೆಳತಿಯರ ಸಹಕಾರ, ತಂದೆ-ತಾಯಿ-ಅಣ್ಣ-ಅತ್ತಿಗೆ-ಅಕ್ಕ-ಮಾವ-ಬಳಗದ ವಾತ್ಸಲ್ಯ ಅನುಪಮ.

ಈ ಅಧ್ಯಯನದ ಸ್ಫೂರ್ತಿ ಒಡಲ ಒಲವಿನ ಅಮೃತವಲ್ಲಿ ಶ್ರೇಯಸ್. ಪ್ರೀತಿಯಿಂದ ಪೀಡಿಸುತ್ತ ಪ್ರೀತಿಯ ಬೆಸುಗೆ ಹಾಕುವ ಶ್ರೇಯಸ್ಸು-ಸೃಜನ-ಸೃಷ್ಟಿ-ಆಕಾಶ ಇವರಿಗೆಲ್ಲ ಸಿಹಿಮುತ್ತುಗಳು. ಪ್ರತ್ಯಕ್ಷ, ಪರೋಕ್ಷ ಸಹಾಯ ಸಲ್ಲಿಸಿದ ಎಲ್ಲರಿಗೂ ಅಕ್ಷರ ಸಂಯೋಜಿಸಿದ ಶ್ರೀ ಮುರಗೇಶ ಕೌಲಾಪೂರ ಅವರಿಗೂ ಕೃತಜ್ಞತೆಗಳು.

ದಿ : ೦೨-೦೯-೨೦೦೮ **ಶ್ರೀಮತಿ ಮಹಾನಂದಾ ಪಾಟೀಲ**

# ಪರಿವಿಡಿ

# ಅಧ್ಯಾಯ – ೧
# ಅಧ್ಯಯನ ಪೂರ್ವ ಪೀಠಿಕೆ

೧.೧. **ಪ್ರವೇಶ :**

ಒಬ್ಬ ಕವಿ ಒಂದು ಕಾವ್ಯ ಪರಂಪರೆಯ ಮುಂದುವರಿಕೆಯ ವಾರಸುದಾರ. ಟಿ.ಎಸ್. ಎಲಿಯಟ್ ಹೇಳುವಂತೆ ಪರಂಪರೆ ಮತ್ತು ಚಾರಿತ್ರಿಕ ಪ್ರಜ್ಞೆ ಇಲ್ಲದವನು ಉತ್ತಮ ಕಾವ್ಯ ಸೃಷ್ಟಿಸಲಾರ. ಅದಕ್ಕೆ ಒಬ್ಬ ಕವಿಯ ಕಾವ್ಯದ ಅಧ್ಯಯನವೆಂದರೆ ಸ್ಥೂಲವಾದ ಅರ್ಥದಲ್ಲಿ ಒಂದು ಭಾಷೆಯ ಕಾವ್ಯ ಪರಂಪರೆಯ ಅಧ್ಯಯನವೇ ಸರಿ.

"ಬೆಳೆದು ನಿಂತ ಕವಿಯೊಬ್ಬನ ವಿಶೇಷತೆಗಳನ್ನು ಹೇಳಬೇಕಾದಾಗ ಆ ಕವಿಯ ಸಮಕಾಲೀನ ಕಾವ್ಯದ ರೀತಿಯನ್ನು ನೋಡುವುದು ಅನಿವಾರ್ಯವಾಗುತ್ತದೆ. ಯಾವೊಬ್ಬ ಕವಿಯ ಕಾವ್ಯವೂ ಒಂದೇ ಗಳಿಗೆಯ, ಒಂದು ದಿನದ ಹೊಸ ನಿರ್ಮಿತಿಯಲ್ಲ. ಯಾವ ಕವಿಯೂ ತನ್ನ ಕಾವ್ಯಾಂಶಗಳನ್ನೆಲ್ಲಾ ಒಮ್ಮೇಲೆ ಹೊಸದಾಗಿ ರೂಪಿಸುವುದು, ನಿರೂಪಿಸುವುದು ಸಾಧ್ಯವಿಲ್ಲ. ಅವನಿಗೆ ತನ್ನ ಸಮಕಾಲೀನವೂ ಸೇರಿದಂತೆ ಪೂರ್ವದ ಭಾಷೆ ಕಾವ್ಯಾದಿಗಳ ಸಂಸ್ಕಾರ ಇರುತ್ತದೆ. ಯಾರು ಕಾವ್ಯ ಬರೆದರೂ ಹಿಂದಿನ ಸಂಸ್ಕಾರದಿಂದ ಕಳಚಿಕೊಂಡು ಕಾವ್ಯ ಕಟ್ಟುವುದು ಸಾಧ್ಯವಿಲ್ಲ. ಆದರೆ ಶಕ್ತ ಕವಿ ಹೊಸ ರೀತಿಯಲ್ಲಿ ಹೇಳಬಲ್ಲ. ಹೊಸದನ್ನು ನಿರ್ಮಿಸಬಲ್ಲ. ಹಾಗಾದಾಗ ಕವಿಯ ಕಾವ್ಯ ಅನೇಕ ವಿಶೇಷತೆಗಳನ್ನು ಪಡೆದುಕೊಂಡು ಅಧ್ಯಯನಯೋಗ್ಯವಾಗುತ್ತದೆ."[೧] ಈ ಹಿನ್ನಲೆಯಲ್ಲಿ ಒಬ್ಬ ಕವಿಯ ಕಾವ್ಯದ ಅಧ್ಯಯನವು ಕಾವ್ಯ ಪರಂಪರೆಯ ಅಧ್ಯಯನದ ಒಂದು ಅಧ್ಯಾಯವಾಗುತ್ತದೆ.

ಇತ್ತೀಚೆಗೆ ಕವಿ ಕೇಂದ್ರಿತ ಅಧ್ಯಯನ ನಿರ್ದಿಷ್ಟ ಪರಿಮಿತಿಯ ಅಧ್ಯಯನವೆಂದು ಭಾವಿತಗೊಳ್ಳುತ್ತದೆ. ಇದು ನಮ್ಮ ಸಂಕುಚಿತ ಮನೋವೃತ್ತಿಯ ಭಾವ. ಒಬ್ಬ ಕವಿಯನ್ನು ಅಧ್ಯಯನದ ಕೇಂದ್ರವಾಗಿಟ್ಟುಕೊಂಡಾಗ ಆ ಭಾಷೆಯ ಒಟ್ಟು ಕಾವ್ಯ ಪರಂಪರೆಯೇ ಒಂದು ವೃತ್ತವಾಗುತ್ತದೆ. ಆ ವೃತ್ತದ ಕೇಂದ್ರ ನಮ್ಮ ಅಧ್ಯಯನದ ಕವಿ ಎನಿಸಿದರೂ ಕಾವ್ಯ ಪರಂಪರೆಯ ಅಧ್ಯಯನದ ಒಂದು ವಿನೂತನ ಆಯಾಮ. ಈ ದೆಸೆಯಲ್ಲಿ ಹೊಸ ಅಧ್ಯಯನ ವಿಧಾನವೊಂದು ತೆರೆದುಕೊಂಡಿದೆ. ಒಂದು ದೃಷ್ಟಿಯಲ್ಲಿ ಇದೊಂದು ತೌಲನಿಕ ಅಧ್ಯಯನದ ಹೊಸ ಮಟ. ಕನ್ನಡ ಕಾವ್ಯ ಪರಂಪರೆಯ ಜೊತೆ-ಜೊತೆಯಲ್ಲಿ ಕವಿಗಳನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಮಾಡುವುದು ತೀರ ಅಗತ್ಯ.

'ಕನ್ನಡ ಕಾವ್ಯ ಪರಂಪರೆ ಮತ್ತು ಕಣವಿ ಕಾವ್ಯ' ಎಂಬ ಇಟ್ಟಣ್ಣವರ ಲೇಖನ, 'ಕವಿ ಕಣವಿ ಹಾಗೂ ಕನ್ನಡ ಕಾವ್ಯ ಪರಂಪರೆ' ಡಾ॥ ಗುಂಡಣ್ಣ ಕಲಬುರ್ಗಿಯವರ ಮಹಾಪ್ರಬಂಧ ಮುಂತಾದವುಗಳಿಗೆ ದಿಕ್ಸೂಚಿಯಾದ ಡಿ. ಆರ್. ನಾಗರಾಜರ 'ಶಕ್ತಿ ಶಾರದೆಯ ಮೇಳ' ಉಲ್ಲೇಖನೀಯ. ಕೀರ್ತಿನಾಥ

೧. ಡಾ॥ ಶ್ರೀರಾಮ ಇಟ್ಟಣ್ಣವರ : ಆನಂದಕಂದರ ಕಾವ್ಯದ ವಿಶೇಷತೆಗಳು (ಲೇ) : ಸೃಜನ–ವಿಧಾನ : ಮಟ–೮

ಕುರ್ತಕೋಟಿ ಅವರ "ಸಾಹಿತ್ಯ ಮತ್ತು ಯುಗಧರ್ಮ" ಪ್ರಶಂಸನೀಯ ಕೃತಿ. ಹೀಗೆ ಕಾವ್ಯ ಪರಂಪರೆಯ ಹಿನ್ನಲೆಯಲ್ಲಿ ಕವಿ ಒಬ್ಬನ ಕಾವ್ಯಗಳನ್ನು ಕೇಂದ್ರ ವಸ್ತುವಾಗಿಟ್ಟುಕೊಂಡ ಮತ್ತೊಂದು ಕಿರು ಪ್ರಯತ್ನವೇ ಡಾ॥ ಶ್ರೀರಾಮ ಇಟ್ಟಣ್ಣವರ ಕಾವ್ಯ ವಿಶ್ಲೇಷಣೆ.

'ಹೊಳಿಸಾಲ ಬಳ್ಳಿ' ಡಾ॥ ಇಟ್ಟಣ್ಣವರ ಅವರ ಮೊದಲ ಕವನ ಸಂಕಲನ. ೧೯೭೩ ರಲ್ಲಿ ಮೊದಲ ಮುದ್ರಿತಗೊಂಡು ಅನಂತರ ಹಲವು ಮುದ್ರಣಗಳನ್ನು ಕಂಡ ಇದು ಅವರಿಗೆ ಖ್ಯಾತಿಯನ್ನು ತಂದು ಕೊಟ್ಟ ಕವನ ಸಂಕಲನ. ೧೯ ನೇ ಶತಮಾನದ ೭೦ರ ದಶಕದಲ್ಲಿ ನವ್ಯ ಕೂಡಾ ತನ್ನ ಮೊನಚು ಕಳೆದುಕೊಂಡಿತ್ತು. ದಲಿತ ಬಂಡಾಯ ಚಳುವಳಿಗೆ ಕಾಲ ಕಾವು ಕೊಡುತ್ತಿದ್ದ ಸಂದರ್ಭವದು. ನವೋದಯದ ಸತ್ಯ, ಬೆಳಕು, ಗೇಯತೆ ಎಂದೋ ಮರೆಯಾಗಿದ್ದವು. ನವ್ಯದ ಪ್ಯಾಶಿನ್ ಕೂಡಾ ಗೇಲಿಗೊಳಗಾಗಿತ್ತು. ೭೦ರ ದಶಕ ಕನ್ನಡ ಕಾವ್ಯ ಪರಂಪರೆಯಲ್ಲಿ ಶೂನ್ಯ ಸೃಷ್ಟಿಸಿದ ಆ ಸಂಕೀರ್ಣ ಸಂದರ್ಭದಲ್ಲಿ ಇಟ್ಟಣ್ಣವರ ಕಾವ್ಯ ಚಿಗುರಿತು. ನವೋದಯ, ಪ್ರಗತಿಶೀಲ, ನವ್ಯಗಳ ಧೋರಣೆಗಳನ್ನು ಕೊಡವಿಕೊಂಡು ಅಪ್ಪಟ ಜಾನಪದ ಪರಂಪರೆಯಲ್ಲಿ ಮೂಡಿ ಬಂದ 'ಹೊಳಿಸಾಲ ಬಳ್ಳಿ' ಕನ್ನಡದ ಮನಸ್ಸುಗಳನ್ನು ರೋಮಾಂಚನಗೊಳಿಸಿತು.

'ಹೊಳಿಸಾಲ ಬಳ್ಳಿ' ಎಂಬ ಸಂಕಲನದ ಶೀರ್ಷಿಕೆಯಲ್ಲಿ ಜಾನಪದ ಸೊಗಡಿನ ಸೊಬಗು ಪರಿಮಳಿಸುತ್ತದೆ. ಜನಪದ ಜೀವನ ಮತ್ತು ಕಾವ್ಯ ಭಿನ್ನವಾಗುವುದಿಲ್ಲ. ಅವೆರಡೂ ಒಂದು ಬಂಡಿಯ ಎರಡು ಗಾಲಿಗಳಂತೆ, ಜೊತೆ-ಜೊತೆಯಾಗಿ ಉರುಳುತ್ತವೆ.

ಜನಪದರ ಬದುಕೇ ಒಂದು ಗರದಿ ಗಮ್ಮತ್ತು. ಅಪ್ಪಟ ಜಾನಪದ ಪರಿಸರದಲ್ಲಿ ಹುಟ್ಟಿ ಬೆಳೆದು ಆ ಜೀವನ ಮೌಲ್ಯಗಳನ್ನು ಬದುಕಿನಲ್ಲಿ ತುಂಬಿಕೊಂಡು ಹಾಡುತ್ತ ಬೆಳೆದ ಇಟ್ಟಣ್ಣವರ ಕವಿಯಾದುದು ಕೇವಲ ಆಕಸ್ಮಿಕವಲ್ಲ. ಅವರದು ಸಹಜ ಪ್ರತಿಭೆ ; ಔಪಾಧಿಕವಲ್ಲ. ಅವರು ಕಾವ್ಯ ಹಾಗೂ ಬದುಕು ಭಿನ್ನವಾಗಿ ಕಂಡವರಲ್ಲ ಕೇವಲ ಅವರೊಬ್ಬರೇ ಅಲ್ಲ, ಅವರ ಮನೆತನದ ಸಾಂಸ್ಕೃತಿಕ ಹಿನ್ನಲೆಯೇ ಅಂಥದ್ದು.

ಶ್ರೀರಾಮ ಇಟ್ಟಣ್ಣವರ ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಯಾದವಾಡದವರು. ಯಾದವಾಡ, ಕೌಜಲಗಿ, ಕುಲಗೋಡ, ಹುಲಕುಂದ, ಬೆಟಗೇರಿ ಪರಿಸರ ಜನಪದ ಸಾಹಿತ್ಯದ ತೊಟ್ಟಿಲು. ಕುಲಗೋಡ ತಮ್ಮಣ್ಣ ಕೃಷ್ಣಪಾರಿಜಾತ ಸಣ್ಣಾಟದ ಜನಕ. ಮಹಾನಟಿ ಕೌಜಲಗಿ ನಿಂಗವ್ವ ಪಾರಿಜಾತದ ಫೆನಿಕ್ಸ ಪಕ್ಷಿ. ಹುಲಕುಂದ ಲಾವಣಿಗಳ ತವರು. ಅಲ್ಲಿಯ ಭೀಮಕವಿ ಶಿವಲಿಂಗ ಕವಿ ಮುಂತಾದವರು ಕನ್ನಡ ನಾಡಿಗೆಲ್ಲ ಚಿರಪರಿಚಿತರು. ಕನ್ನಡಕ್ಕೆ ನಲ್ವಾಡುಗಳನ್ನು ಕೊಟ್ಟ 'ಆನಂದಕಂದ' ಬೆಟಗೇರಿ ಕೃಷ್ಣಶರ್ಮ ಬೆಟಗೇರಿಯವರು. ಈ ಪರಿಸರ ಲಾವಣಿ ತರಂಗಗಳಿಂದ ತುಂಬಿಕೊಂಡಿರುವಂತದ್ದು. ಯಾದವಾಡದ ಮಲಕಪ್ಪ ಹೂಗಾರ ಕುಲಗೋಡ ತಮ್ಮಣ್ಣನ ಕೃಷ್ಣ ಪಾರಿಜಾತದಲ್ಲಿ ಸ್ವರಪೆಟ್ಟಿಗೆ ನುಡಿಸುತ್ತಿದ್ದನು. ಈ ಎಲ್ಲ ಜಾನಪದೀಯ ಸಾಂಸ್ಕೃತಿಕ ಹಿನ್ನಲೆ ಇಟ್ಟಣ್ಣವರನ್ನು ಕವಿಯಾಗಿ ರೂಪಿಸಿತು.

ಯಾದವಾಡದ ಇಟ್ಟಣ್ಣವರ ಮನೆತನ ಹಾಡುಗಾರಿಕೆಗೆ ಹೆಸರುವಾಸಿಯಾದುದು. ಅವರು ಮಾತ್ರವಲ್ಲ. ಅವರ ಕುಟುಂಬದ ಬಹುಪಾಲು ಜನರು ಗಾಯಕರೇ. ಇತ್ತೀಚಿಗೆ ಅಂದರೆ ದಿ.೨೫-೦೨-೨೦೦೮ ರಂದು 'ಸಂಯುಕ್ತ ಕರ್ನಾಟಕ' ದಿನಪತ್ರಿಕೆ 'ಬಸಪ್ಪಣ್ಣ ಇಟ್ಟಣ್ಣವರ' ಅವರನ್ನು ಪರಿಚಯಿಸಿದೆ. ಇವರು ಡಾ॥ ಇಟ್ಟಣ್ಣವರ ಅವರ ಸಹೋದರ, ಅದ್ಭುತ ಹಾಡುಗಾರ. ಜನಪದ

ಕಾವ್ಯಕ್ಕೆ ಜೀವ ತುಂಬುವುದು ಈ ಮನೆತನದ ಶಕ್ತಿ. ಇಂಥ ಪರಿಸರದಲ್ಲಿ ಅರಳಿದ ಶ್ರೀರಾಮ ಇಟ್ಟಣ್ಣವರ ಜನಪದ ಸಾಹಿತ್ಯದ ಸೊಬಗು–ಸೊಗಸು–ಸೊಲ್ಲುಗಳನ್ನು ತಮ್ಮ ಪ್ರತಿಭಾ ಕುಲುಮೆಯಲ್ಲಿ ಹೊಸತುಗೊಳಿಸಿ ಎರಕು ಹೊಯ್ದದ್ದು ಅವರ ಅಗ್ಗಳಿಕೆ.

ಡಾ॥ ಇಟ್ಟಣ್ಣವರ ಪ್ರಥಮಥ : ಲಾವಣಿ ಕವಿ. ಲಾವಣಿ ಅವರ ಬೆನ್ನಿಗಂಟಿಕೊಂಡ ಬಂಧ. ಲಾವಣಿ ಲಯ ಇಟ್ಟಣ್ಣವರ ಕಾವ್ಯದ ಜೀವಾಳ. ಅವರಿಗೆ ಲಾವಣಿ ಎಂದರೆ ಕೇವಲ ಕಾವ್ಯವಲ್ಲ. ಬದುಕಿನ ಅನಿವಾರ್ಯವಾದ ಒಂದು ಅಂಗ ಅಥವಾ ಭಾಗ. ಲಾವಣಿ ಅವರ ಅತ್ಯಂತ ಪ್ರೀತಿಯ ಕಾವ್ಯ ಪ್ರಭೇದ. ಲಾವಣಿಗಳನ್ನು ಹಾಡುವುದರಲ್ಲಿ ಅವರಿಗೆ ಎಲ್ಲಿಲ್ಲದ ಆನಂದ ಲಾವಣಿ ಲಯ, ತಾಳ, ಚೌಕ ಮೊದಲಾದವುಗಳೆಲ್ಲವೂ ಅವರಿಗೆ ಗೊತ್ತು. ಡಾ॥ ಇಟ್ಟಣ್ಣವರ ಮೂಲತಃ ಒಬ್ಬ ಹಾಡುಗಾರ, ಅನಂತರ ಕವಿ, ಆಮೇಲೆ ಜನಪದ ವಿದ್ವಾಂಸ. ಹೀಗಾಗಿ ಲಾವಣಿಯ ಸಹಜ ಲಯ ಅವರ ಕಾವ್ಯಕ್ಕೆ ಉಸಿರು ತುಂಬುವ ಭಾವ ಸನಾದಿ ಆಯಿತು. ಇವು ಅವರ ಸಾಹಿತ್ಯದ ಬೆಳವಣಿಗೆಯ ಪ್ರಮುಖ ಘಟ್ಟಗಳು.

ಡಾ॥ ಇಟ್ಟಣ್ಣವರ ಅವರ ಕಾವ್ಯವನ್ನು ಅಧ್ಯಯನಿಸುವಾಗ ಲಾವಣಿಗಳನ್ನು ಬದಿಗಿಟ್ಟು ನೋಡಲಾಗದು. ಅವರ ಮೊದಲ ಕವನ ಸಂಕಲನವಾದ 'ಹೊಳಿಸಾಲ ಬಳ್ಳಿ'ಯಲ್ಲಿ ಲಾವಣಿ ಹೆಸರಿನಿಂದ ಒಂದೇ ಕವಿತೆ ಇದ್ದರೂ ಹಲವು ಕವಿತೆಗಳಲ್ಲಿ ಆ ಲಯದ ಲಾಳಿ ಆಡುತ್ತಿದೆ. ಅದಕ್ಕಾಗಿ 'ಹೊಳಿಸಾಲ ಬಳ್ಳಿ'ಯಲ್ಲಿಯ ಬರಗಾಲ ಲಾವಣಿ ಅಲ್ಲಿಯ ಉಳಿದೆಲ್ಲ ಕವಿತೆಗಳಿಗಿಂತಲೂ ಹೆಚ್ಚು ಯಶಸ್ವಿಯಾದುದನ್ನು ಕವಿ ಕಣವಿ ಉಲ್ಲೇಖಿಸಿದ್ದಾರೆ.

ಬರಗಾಲ ಲಾವಣಿ ಈಚೆಗೆ ನಮ್ಮ ನಾಡಿಗೊದಗಿದ ಭೀಕರ ಬರಗಾಲದ ಬವಣೆಯನ್ನು ಎದೆ ಕರಗುವಂತೆ ಚಿತ್ರಿಸುತ್ತದೆ. ಭೂಮಿಯನ್ನೇ ನೆಚ್ಚಿಗೊಂಡಿದ್ದ ಒಕ್ಕಲು ಮಕ್ಕಳು ಅನ್ನಾನ್ನಗತಿಕರಾಗಿ ತಮ್ಮ–ತಮ್ಮ ಊರುಗಳನ್ನೇ ಬಿಟ್ಟು ಗುಳೇ ಹೊರಡಬೇಕಾಗಿ ಬಂದ ಪ್ರಸಂಗವನ್ನು ಶಕ್ತಿಯುತವಾಗಿ, ಕಣ್ಣಿಗೆ ಕಟ್ಟುವಂತೆ, ಹೃದಯಕ್ಕೆ ತಟ್ಟುವಂತೆ ಈ ಲಾವಣಿ ಬಣ್ಣಿಸುತ್ತದೆ. ಸನ್ನಿವೇಶಗಳ ನಾಟಕೀಯತೆಗೆ ಮಟಗೊಟ್ಟು ಚಾಲ, ಕೂಡ, ಪಲ್ಲಗಳು ಮೇಳವಿಸಿ ನಿರೂಪಣೆಗೆ ತಕ್ಕ ಚೌಕಟ್ಟನ್ನೂ, ದಾಟಿಗೆ ಒಂದು ಹಿಡಿತವನ್ನೂ ತಂದು ಈ ದೇಶಿ ಛಂದದ ರಸ ಭಾಗ್ಯವನ್ನು ಹೆಚ್ಚಿಸಿದೆ. ಈ ಸಂಗ್ರಹದ ಉಳಿದ ಕವಿತೆಗಳೆಲ್ಲ ಒಂದು ತೂಕವಾದರೆ ಈ ಲಾವಣಿ ಹಾಡಿನದೇ ಒಂದು ತೂಕವಾಗಿ ಕವಿಯ ಪಳಗಿದ ಕೈಯನ್ನು ಕಾಣುತ್ತೇವೆ.

ಗಾಳಿ ಪಟದ್ಹಾಂಗ ಹರದ್ಹೋತ ಬಾಳೆ
ಏನ ಹೇಳಲಿ ಬರಗಾಲ ಮಾತಾ !

ಹಿಡಿ ಅನ್ನಕ್ಕಾಗಿ ಗತಿಗೆಡುದಾತು
ಎಂಥ ಯಾಳೆ ತಂದ್ಯೋ ಭಗವಂತಾ !![೨]

ಬರಗಾಲದ ಭೀಕರತೆಯನ್ನು ಕರುಳಿಗೆ ಕೊಳ್ಳಿ ಇಟ್ಟಂತೆ ಬಣ್ಣಿಸುವದು ಈ ಲಾವಣಿಯ

೨. ಬರಗಾಲ ಲಾವಣಿ : ಹೊಳಿಸಾಲ ಬಳ್ಳಿ : ಪುಟ–೪೧

ವೈಶಿಷ್ಟ್ಯ. ಒಂದೆಡೆ ಕುಡಿಯುವ ನೀರಿಗೆ ಹಾಹಾಕಾರ. ಮತ್ತೊಂದೆಡೆ ಹಸಿವಿನಿಂದ ನರಳುವ ದನ-ಕರುಗಳ ಚಿತ್ಕಾರ. ತಮ್ಮ ಕರುಳಿನ ಕುಡಿಯಂತೆ ರೈತರು ಸಾಕಿ ಬೆಳೆಸಿದ ಎತ್ತು-ಆಕಳು-ಎಮ್ಮೆ ಹಸಿವಿನಿಂದ ಪ್ರಾಣ ಬಿಡುವ ಸಂಕಟದ ನಿಟ್ಟುಸಿರು ಪ್ರಸ್ತುತ ಲಾವಣಿಯಲ್ಲಿ ಸಜೀವಗೊಂಡಿದೆ.

**ಹಸರಿಲ್ಲ ಹೂವಿಲ್ಲ ಉರಿಯಾತ ಭೂಮಿ**
**ಎದ್ದ ಬಡಿಯತತಿ ರಣಾ ರಣಾ**
**ಬೇವಿನ ತಪ್ಪಲ ಬಾಯಿ ಹಾಕಿ ತಿಂತಾವ**
**ಹಸಿದ ಹೊಟ್ಟೆ ಹಿಡಿಲಿಲ್ಲ ಕೂನಾ** ೩

**ಹೊಟ್ಟೆ ಸಂಕಟಕ್ಕಾಗಿ ಅಂಬಾ ಅಂಬಾ ಅಂತ**
**ಒದರತಾವ ಒಂದs ಸವನಾ**
**ಪಾಪ ಹೆಚ್ಚಾತು ಭೂಮಿ ಮ್ಯಾಲ ಇದ**
**ಅದರ ಫಲಾ ಅನ್ನೂರು ಜನಾ** ೪

ಸಾಮಾನ್ಯವಾಗಿ ಜನಪದರು ನಿಸರ್ಗದ ಏಣಿ ಆಟಕ್ಕೆಲ್ಲ ಪಾಪ-ಪುಣ್ಯಗಳ ತೇಪೆ ಹಚ್ಚುವರು. ಭೂಮಿ ಮೇಲೆ ಪಾಪ ಹೆಚ್ಚಾದಾಗ ಬರ; ಪುಣ್ಯ ಹೆಚ್ಚಾದಾಗ ಭರ ಉಂಟಾಗುವವೆಂಬುದು ಜನರ ನಂಬುಗೆ. ಆದರೆ ಈ ನಂಬಿಗೆಯನ್ನು ಕವಿ ವಿಮರ್ಶಿಸುವ ವೈಚಾರಿಕ ನೆಲೆಯೇ ಗಮನ ಸೆಳೆಯುತ್ತದೆ. ಪಾಪ ಮಾಡುವವರು ಮನುಷ್ಯರು, ಆದರೆ ಅವರ ಪಾಪದ ಫಲ ದನಗಳಿಗೇಕೆ ತಟ್ಟಬೇಕೆಂಬುದು ಕವಿಯ ಜಿಜ್ಞಾಸೆ.

**ಪಾಪ ಮಾಡಿದರ ಮನಸ್ಯಾರಿಗಿರಲಿ**
**ಮೂಕ ಬಸವಣ್ಣ ಮಾಡಿದ್ದ ಏನಾ ?**೫

ಈ ವೈಚಾರಿಕ ಪ್ರಜ್ಞೆಯಿಂದಾಗಿ ಡಾ॥ ಇಟ್ಟಣ್ಣವರ ನಮಗೆ ಹೆಚ್ಚು ಪ್ರಸ್ತುತವಾಗುತ್ತಾರೆ. ಅವರ ಕಾವ್ಯ ಜಾನಪದ ಜಗತ್ತನ್ನು ಸುತ್ತುತ್ತಲೇ ಅದರ ಆಚೆಗಿನ ವೈಜ್ಞಾನಿಕ, ವೈಚಾರಿಕ, ವೈಭಾವಿಕ ಮೇಲ್-ಸ್ತರಗಳಲ್ಲಿ ತರಂಗಿಸುತ್ತದೆ. ವರಕವಿ ದ.ರಾ.ಬೇಂದ್ರೆ ಜನಪದ ಸಾಹಿತ್ಯದ ಸತ್ವವನ್ನು ಹೀರಿಕೊಂಡು ಕಾವ್ಯ ಕಟ್ಟಿದಂತೆ ಡಾ॥ ಇಟ್ಟಣ್ಣವರ ಅದರ ಎಲ್ಲ ಸಾಧ್ಯತೆಗಳನ್ನು ; ವೈವಿಧ್ಯತೆಗಳನ್ನು ಸಾಕಾರಗೊಳಿಸಿಕೊಂಡು ಕಾವ್ಯಕ್ಕೆ ಹೊಸ ಮೆರಗು ನೀಡಲು ಪ್ರಯತ್ನಿಸಿದರು.

ಪ್ರೇಮ ಜನಪದ ಸಾಹಿತ್ಯದ ಬಹುಮುಖ್ಯ ನೆಲೆಗಳಲ್ಲೊಂದು ಅಲ್ಲಿ ದಾಂಪತ್ಯ ಪ್ರೇಮವಿದೆ, ದಾಂಪತ್ಯದಾಚೆಯ ಪ್ರೇಮವಿದೆ, ದಾಂಪತ್ಯ ಪೂರ್ವದ ಪ್ರೇಮವಿದೆ. ವಿವಾಹ ಗಂಡು-ಹೆಣ್ಣಿನ ಪ್ರೇಮದ ನೈತಿಕ ಮುದ್ರೆ. ಆದರೆ ವಿವಾಹಪೂರ್ವ ಪ್ರೇಮದ ಮಡಿವಂತಿಕೆ ಸಾಹಿತ್ಯಕ್ಕೆ ಸಲ್ಲದು. ಪ್ರೀತಿ ಎಂದರೆ ಒಂದು ಸೆಳೆತ. ಅದು ಸೃಷ್ಟಿಗಾಗಿ ಸೃಷ್ಟಿಯ ಸೆಳೆತ. ಅಲ್ಲಿ ನೈತಿಕ-ಅನೈತಿಕವೆಂಬ ತಾರ್ಕಿಕತೆ

---

೩. ಅದೇ. ಪುಟ-೫೫
೪. ಅದೇ.
೫. ಅದೇ.

ಇಲ್ಲ. ಅದೇನಿದ್ದರೂ ನಾವು ಸೃಷ್ಟಿಸಿಕೊಂಡದ್ದು. ಇದನ್ನೆ ಶಿಷ್ಟತೆ ಎಂದು ಕರೆಯಬಹುದು. ಹಾಗೆ ನೋಡಿದರೆ ಈ ನೈತಿಕ ಕಲ್ಪನೆಯನ್ನು ಸೃಷ್ಟಿಸಿದ್ದೇ ಶಿಷ್ಟತೆ.

ಜನಪದ ಸಾಹಿತ್ಯದಲ್ಲಿ ವಿವಾಹಪೂರ್ವ ಪ್ರಣಯದ ಹಲವಾರು ಚಿತ್ರಗಳಿವೆ. ಇವುಗಳನ್ನು ಗರತಿಯ ಹಾಡುಗಳ ತ್ರಿಪದಿಗಳಲ್ಲಿ, ಮಲ್ಲಿಗೆ ದಂಡೆಯ ಹಾಡುಗಳಲ್ಲಿ ಕಾಣಬಹುದು. ಜನಪದ ಕತೆಗಳಲ್ಲಿ ಹೇರಳ ನಿದರ್ಶನಗಳಿವೆ. ಆದರೂ ಶಿಷ್ಟ ಸಮಾಜ ಈ ಮಡಿವಂತಿಕೆಯಿಂದ ಹೊರಬಂದಿಲ್ಲ. ಒಳ ಒಳಗೆ ಅದರ ಆಕರ್ಷಣೆ ಇದ್ದರೂ ಹೊರಗೆ ಮಾತ್ರ ನೈತಿಕತೆಯ ಸೋಗಿನಲ್ಲಿ ಬೀಗುತ್ತಿರುವುದು ನಮಗೆಲ್ಲಾ ಗೊತ್ತು. ಇಂಥ ಸೋಗುಗಳನ್ನು ಬಯಲುಗೊಳಿಸಿ ಅಪ್ಪಟ ಪ್ರಣಯ ಕಾವ್ಯವನ್ನು ಕನ್ನಡಕ್ಕೆ ಕೊಟ್ಟವರು ಡಾ॥ ಶ್ರೀರಾಮ ಇಟ್ಟಣ್ಣವರ.

ಹದಿ ಹರೆಯದ ಮನಸ್ಸುಗಳು ತಳಕುಗೊಳ್ಳಲು ಮಿಡಿಯುವ ಆ ತುಡಿತವನ್ನು ಇಟ್ಟಣ್ಣವರ 'ಹೊಳಿಸಾಲ ಬಳ್ಳಿ'ಯಲ್ಲಿ ಬಲು ಸೊಗಸಾಗಿ ಮೀಟಿದ್ದಾರೆ.

**ಏರ ಹರೇದಾಂವ ಗೆಳತಿಯ ಅಣ್ಣಾ**
**ಒಳ್ಳೆ ರೂಪವಂತ**
**ಹಾಲ ಮ್ಯಾಲಿನ ಕೆನಿಹಾಂಗ ನಮ್**
**ಪ್ರೀತಿ ಕೂಡಿ ಬಂತ.** [೧]

**ನೀರ ನೆವಾ ಮಾಡಿ ಕೆರಿ ದಾರ್‍ಯಾಗ**
**ಅವನ ಕೂಡತನ**
**ಹಿರಿಯಾರನ್ನವರ ನೆದರ ತಪ್ಪಿಸಿ**
**ಮಾರಿ ನೋಡತನ.** [೨]

ಶಿಷ್ಟ ಕಣ್ಣುಗಳಲ್ಲಿ ಇದು ಅಶ್ಲೀಲವೆನಿಸಬಹುದು. ಆದರೆ ಪ್ರೀತಿಗೆ ಶೀಲ–ಅಶ್ಲೀಲತೆಯ ಭೇದವಿಲ್ಲ. ವಿವಾಹಪೂರ್ವ ಪ್ರೇಮವನ್ನು ಪುರಸ್ಕರಿಸುವುದು ತಪ್ಪು ಎಂಬ ಭಾವ ಜನಮನದಲ್ಲಿ ಇಂದಿಗೂ ಸ್ಥಾವರಗೊಂಡಿರುವಾಗ ಡಾ॥ ಇಟ್ಟಣ್ಣವರ ಹೊಸತು ಮಲ್ಲಿಗೆಮಾಲೆಯ ವಾಸನೆಯ ಕಾವ್ಯವನ್ನು ಕನ್ನಡಕ್ಕೆ ಕೊಟ್ಟವರು. ಕೆ.ಎಸ್. ನರಸಿಂಹಸ್ವಾಮಿಯವರ 'ಮೈಸೂರು ಮಲ್ಲಿಗೆ'ಯನ್ನು ಪ್ರೇಮ ಕಾವ್ಯವೆಂದು ಕರೆಯುವುದು ವಾಡಿಕೆ. ಅದು ದಾಂಪತ್ಯ ಕಾವ್ಯ. ಅಲ್ಲಿ ದಾಂಪತ್ಯ ಪ್ರೇಮವಿದೆ. 'ಹೊಳಿಸಾಲ ಬಳ್ಳಿ'ಯಲ್ಲಿ ದಾಂಪತ್ಯ ಪೂರ್ವದ ನಿಸರ್ಗ ಸಹಜ ಪ್ರೇಮದ ಹೊಳೆ ಹರಿಯುತ್ತಿದೆ. ಆದ್ದರಿಂದ ಡಾ॥ ಇಟ್ಟಣ್ಣವರ ಕನ್ನಡಕ್ಕೆ ಅಪ್ಪಟ ಪ್ರೇಮ ಕಾವ್ಯವನ್ನು ಕೊಟ್ಟ ಮೊದಲ ಕವಿ ಎಂದು ಹೇಳಿದರೆ ಅತಿಶಯೋಕ್ತಿ ಆಗದು. ಶೀಲ–ಅಶ್ಲೀಲದ ಎಲ್ಲೆ ಮೀರಿ ಸೃಷ್ಟಿಶೀಲ ಸಹಜ ಪ್ರೀತಿಯ ಬಳ್ಳಿಯನ್ನು 'ಹೊಳೆಸಾಲ' ತುಂಬ ಹರುಹಿದ ಈ ಕವಿಯ ಕಾವ್ಯದ ಸೆಲೆಗಳನ್ನು ಗುರುತಿಸಲು ಅಧ್ಯಯನದ ಅಗತ್ಯವಿದೆ. ಡಾ॥ ಇಟ್ಟಣ್ಣವರ ಕಾವ್ಯದ ಅಧ್ಯಯನ ಕನ್ನಡ ಪ್ರೇಮ ಕಾವ್ಯದ ಇತಿಹಾಸಕ್ಕೆ ಮುನ್ನುಡಿಯಾಗಬಲ್ಲದು.

---

**೧. ಮನಿಯಾಗ ಹೇಳಲ್ಯಾಂಗ : ಹೊಳಿಸಾಲ ಬಳ್ಳಿ : ಪುಟ–೩**

**೨. ಅದೇ.**

ಡಾ॥ ಶ್ರೀರಾಮ ಇಟ್ಟಣ್ಣವರ ಸಂವೇದನೆಗಳು ಜಾನಪದೀಯವಾಗಿದ್ದರೂ ಮನಸ್ಸು ಆಧುನಿಕ, ದೃಷ್ಟಿ ವೈಚಾರಿಕ, ಚಿಂತನೆ ವೈಜ್ಞಾನಿಕ.

ಕುರಿ ಕಾಯುವ ಕರಿಯಪ್ಪನಿಗೆ ಸ್ವಾತಂತ್ರ್ಯ ಬಂದಿದೆ, ಆಧುನಿಕ ಪ್ರಜ್ಞೆ ಮೂಡಿದೆ. ಸ್ವಾವಲಂಬನೆ ಸಿದ್ಧಿಸಿದೆ. ಅದಕ್ಕೆ ಆತ ಪ್ರತಿ ಸಲವೂ ಬೊಗಳುತ್ತಿದ್ದ ಜೂಲಿಯ ನಾಯಿಗೆ ಬಡಿಗೆ ತೋರಿಸುತ್ತಾನೆ. ತಲೆಯ ಮೇಲೆ ಮೆಣಸು ಅರಿಯುತ್ತಿದ್ದ ಗೌಡನಿಗೆ ದಬಾಯಿಸುತ್ತಾನೆ. ಹೀಗೆ ಡಾ॥ ಇಟ್ಟಣ್ಣವರ ಕಾವ್ಯ ಜಾನಪದೀಯ ಸಂವೇದನೆಗಳಿಗೆ ಮಾತ್ರ ಅಂಟಿಕೊಳ್ಳದೇ ಆಧುನಿಕ ಒಲವುಗಳಿಗೆ ತೀವ್ರವಾಗಿ ಸ್ಪಂದಿಸುತ್ತದೆ.

ಡಾ॥ ಶ್ರೀರಾಮ ಇಟ್ಟಣ್ಣವರ ಕಾವ್ಯದ ಅಧ್ಯಯನವೆಂದರೆ ಸ್ಥೂಲವಾದ ಅರ್ಥದಲ್ಲಿ ಕನ್ನಡ ಕಾವ್ಯದ ಒಂದು ಘಟ್ಟದ ಅಧ್ಯಯನವೇ ಸರಿ. ಅಲ್ಲಿಯ ಸಂವೇದನೆಗಳಲ್ಲಿ ಆಧುನಿಕ ಮನಸ್ಸು, ಜನಪದ ಜೀವನ, ಯಾಂತ್ರಿಕ ಜಗತ್ತಿನ ತುಮುಲ, ಸಾಮಾಜಿಕ ಪ್ರಜ್ಞೆ, ಪ್ರಜಾತಾಂತ್ರಿಕ ಜವಾಬ್ದಾರಿ ಮುಂತಾದವುಗಳೆಲ್ಲಕ್ಕಿಂತಲೂ ಜೀವನದ ಜೀವಾಳವೆನಿಸಿದ ಪ್ರೀತಿಯ ಅಲೆಗಳು ಅನಾವರಣಗೊಳ್ಳುತ್ತವೆ. ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಅಧ್ಯಯನ ಹರವು ಪಡೆದುಕೊಳ್ಳಲಿದೆ.

ಡಾ॥ ಇಟ್ಟಣ್ಣವರ ಹೆಚ್ಚು ಬರೆದವರಲ್ಲ. ಅವರ ಇದುವರೆಗಿನ ಒಟ್ಟು ಕವನ ಸಂಕಲನಗಳ ಸಂಖ್ಯೆ ಐದು. ಒಟ್ಟು ಕವಿತೆಗಳ ಸಂಖ್ಯೆ ೨೦೮. ಇದರಲ್ಲಿ ೧೦೦ ಶಿಶುಗೀತೆಗಳು. ಅವರ ಮೊದಲ ಕವನ ಸಂಕಲನ "ಹೊಳಿಸಾಲ ಬಳ್ಳಿ" ಪ್ರಕಟಗೊಂಡದ್ದು ೧೯೭೩ ರಲ್ಲಿ, ಅನಂತರ "ಗಾಲಿ ಉಳ್ಳತೈತಿ" "ಹಾಡುಣು ಬಾರ್ರ ಪ್ರೇಮದ ಹಾಡಾ" "ಶಿಶು ಗೀತೆಗಳು" "ಹೊತ್ತು ಮೂಡುವ ಸಮಯ" ಕಾಲಾನುಕ್ರಮದಲ್ಲಿ ಪ್ರಕಟಗೊಂಡವು. ಅವರ ಇತ್ತೀಚಿನ ಕವನ ಸಂಕಲನ "ಹೊತ್ತು ಮೂಡುವ ಸಮಯ" ಪ್ರಕಟಗೊಂಡದ್ದು ೨೦೦೧ ರಲ್ಲಿ. ಅಂದರೆ ಸುಮಾರು ಮೂರು ದಶಕಗಳ ಅವಧಿಯಲ್ಲಿ ಐದು ಕವನ ಸಂಕಲನಗಳು ಪ್ರಕಟಗೊಳ್ಳುವುದು ಸಂಖ್ಯೆಯ ದೃಷ್ಟಿಯಿಂದ ವಿಶೇಷವೆನಿಸದಿದ್ದರೂ ಸತ್ವದಲ್ಲಿ ಕಡಿಮೆ ಇಲ್ಲ. ಒಬ್ಬ ಕವಿಯ ಕಾವ್ಯದ ಮೌಲ್ಯ ಕವಿತೆ ಅಥವಾ ಕವನ ಸಂಕಲನಗಳ ಸಂಖ್ಯೆಯನ್ನು ಅವಲಂಬಿಸುವುದಿಲ್ಲ. ಅದಕ್ಕಾಗಿ ಇಟ್ಟಣ್ಣವರ ಕಾವ್ಯದ ಬಹು ನೆಲೆಗಳನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಕಿರು ಮಹಾಪ್ರಬಂಧವನ್ನು ರಚಿಸಲಾಗುತ್ತಿದೆ.

ಇಟ್ಟಣ್ಣವರ ಕಾವ್ಯದ ದಾರಿ ಕೂಡ ವೈವಿಧ್ಯಮಯವಾಗಿದೆ. "ಹೊಳಿಸಾಲ ಬಳ್ಳಿ" (೧೯೭೩), ಪ್ರೇಮಗೀತೆಗಳ ಗುಚ್ಛ. ಗಾಲಿ ಉಳ್ಳತೈತಿ (೧೯೮೭) ಸಾಮಾಜಿಕ ತಲ್ಲಣಗಳನ್ನು ತರಂಗಿಸುವ ಕವನ ಸಂಕಲನ. ಹಾಡುಣು ಬಾರ್ರ ಪ್ರೇಮದ ಹಾಡಾ (೧೯೯೧) ಪ್ರೇಮಗೀತೆಗಳ ಎರಡನೇ ಸಂಕಲನ. ಹೊತ್ತು ಮೂಡುವ ಸಮಯ (೨೦೦೧) ಹೊಸ ತಿರುವಿನಲ್ಲಿ ಮೂಡಿ ಬಂದ ವಿಶಿಷ್ಟ ಸಂಕಲನ. ನೂರು ಶಿಶುಗೀತೆಗಳ ಸಂಕಲನ ಮತ್ತೊಂದು.

## ೧.೧. ಅಧ್ಯಯನ ಉದ್ದೇಶ :

ಡಾ॥ ಇಟ್ಟಣ್ಣವರ ಪ್ರೀತಿಯ ಕವಿ. ಅವರ "ಹೊಳಿಸಾಲ ಬಳ್ಳಿ"ಯ ತುಂಬೆಲ್ಲ ಪ್ರೀತಿಯ ಹೂವುಗಳೇ. ಪ್ರೀತಿ ಸೌರಮಂಡಲದ ಸೂತ್ರ. ಅದಲ್ಲದೆ ರಾತ್ರಿಹಗಲುಗಳೇ ಇಲ್ಲ. ಬದುಕಿನ ಬಟ್ಟ ಬೇಸಿಗೆಯ ಬೇಗೆಯಲ್ಲಿ ಪ್ರೀತಿಯ ಗಾಳಿಯ ಒಂದು ಸೆಳಕು ಹೊಸ ಉತ್ಸಾಹ ತುಂಬುತ್ತದೆ.

ದಿನದ ಬಾಳೆದಾಗ ದುಕ್ಕ ದುಮ್ಮಾನ
ಬೀಸಿ ಹೊಡಿತಾsವ
ಆದರೂನು ಪ್ರೀತಿ ಐತಿ ಅಂತsನ
ಜೀವ ಹಿಡಿತೇವ ೮

ಈ ಕಾವ್ಯ ಪ್ರೀತಿಯ ಮೀಮಾಂಸೆಯ ಪರಿಶೀಲನೆ ಈ ಅಧ್ಯಯನದ ಮೊದಲ ಉದ್ದೇಶವಾಗಿದೆ. ಈ ಕವಿಯ ಪ್ರೀತಿಯ ಸ್ವರೂಪದ ಅವಲೋಕನ ಅಗತ್ಯವೆನಿಸುತ್ತದೆ. ಸಾಂಸ್ಕೃತಿಕ-ಸಾಮಾಜಿಕ ಪರೀಧಿಯಲ್ಲಿಯೇ ತುಡಿಯುವ ಪ್ರೀತಿಯ ತುಡಿತದ ಎದೆ ಬಡಿತಗಳನ್ನು ಅಳೆದು, ಅದರ ವಿವಿಧ ಆಯಾಮಗಳನ್ನು ಗುರುತಿಸಲು ಪ್ರಯತ್ನಿಸಲಾಗುವುದು.

ಇಟ್ಟಣ್ಣವರ ಕವಿತೆಗಳ ಭಾವದ ಸೆಲೆಗಳ ಶೋಧ ಮುಖ್ಯವಾಗುತ್ತದೆ. ಜೊತೆಗೆ ಪ್ರಭಾವ-ಪ್ರೇರಣೆ-ಪರಿಣಾಮಗಳ ನೆಲೆಯಲ್ಲಿ ತೂಗಲು ಯೋಜಿಸಿದೆ. ಶ್ರೀರಾಮ ಇಟ್ಟಣ್ಣವರ ಕಾವ್ಯ ಬರೀ ಪ್ರೀತಿಯ ನೆಲೆಯಲ್ಲಿಯೇ ಕಳೆದುಹೋಗುವುದಿಲ್ಲ. ಹೆಣ್ಣು-ಗಂಡಿನ ಸಂಬಂಧದ ವಿಶ್ಲೇಷಣೆಯಲ್ಲಿ ತೆರೆದುಕೊಳ್ಳುತ್ತಾರೆ. ಅವರ ಕಾವ್ಯ ವೈಯಕ್ತಿಕ ನೆಲೆಯಿಂದ ಸಾಂಸ್ಥಿಕ ಹಾಗೂ ಸಾಂಸ್ಕೃತಿಕ ಎತ್ತರ ಬಿತ್ತರಗಳನ್ನು ಸಾಧಿಸುವುದು ವಿಶೇಷ. ಈ ಎಲ್ಲ ನೆಲೆಗಳಲ್ಲಿ ಅವರ ಕಾವ್ಯವನ್ನು ಅಧ್ಯಯನಿಸುವಲ್ಲಿ ಪ್ರಯತ್ನಿಸಲಾಗಿದೆ.

ಒಬ್ಬ ಕವಿಯ ಸಮಗ್ರ ಕಾವ್ಯದ ಅಧ್ಯಯನವೆಂದರೆ ಒಂದು ಕಾಲ ಘಟ್ಟದ ಕಾವ್ಯದ ಅಧ್ಯಯನವೇ ಸರಿ. ಏಕೆಂದರೆ ಇಟ್ಟಣ್ಣವರ ಕಾವ್ಯದ ಅಧ್ಯಯನ ಕೇವಲ ವ್ಯಕ್ತಿ ಕೇಂದ್ರಿತವಲ್ಲ. ಅವರ ಸಮಕಾಲೀನ ಮಹತ್ವದ ಕವಿಗಳ ಕಾವ್ಯದೊಂದಿಗೆ ತೂಗಬೇಕು. ಆಗ ಮಾತ್ರ ಕಾವ್ಯದ ನಿಜವಾದ ಮೌಲ್ಯವಿವೇಚನೆಯಾಗುತ್ತದೆ. ಈ ದೃಷ್ಟಿಯಿಂದ ಪ್ರಸ್ತುತ ಅಧ್ಯಯನ ಇನ್ನೂ ಮುಖ್ಯವಾಗುತ್ತದೆ.

ಬೇಂದ್ರೆ, ನರಸಿಂಹಸ್ವಾಮಿ, ಕಣವಿ, ಶಿವರುದ್ರಪ್ಪ, ಆನಂದಕಂದ, ಡಾ. ಸೋಮಶೇಖರ ಇಮ್ರಾಪೂರ, ಸುಮತೀಂದ್ರ, ನಾಡಿಗ ಮೊದಲಾದ ಕವಿಗಳು ಪ್ರೀತಿಯ ಚಿರಂತನತೆಯನ್ನು ಕವಿತೆಗಳ ಮೂಲಕ ಅಭಿವ್ಯಕ್ತಿಸಿದರು. ಇವರೆಲ್ಲರೊಳಗೆ ಡಾ. ಇಟ್ಟಣ್ಣವರನ್ನು ಗುರುತಿಸುವುದು, ಈ ಅಧ್ಯಯನ ಮತ್ತೊಂದು ಆಯಾಮ. ಜಾನಪದೀಯ ಮೂಲ ಸಂವೇದನೆಗಳನ್ನು ಆಧುನಿಕತೆಗೆ ಒಗ್ಗಿಸುವ ಇಟ್ಟಣ್ಣವರ ಕಾವ್ಯದ ಸಾಧನೆ ಅಧ್ಯಯನಕ್ಕೆ ಹೊಸ ತಿರುವು ನೀಡುತ್ತದೆ. ಹೀಗೆ ಹಲವು ಅಂಶಗಳನ್ನು ಇಲ್ಲಿ ಚರ್ಚೆಗೊಳಪಡಿಸಲಾಗಿದೆ.

## ೧.೨. ಅಧ್ಯಯನದ ಸ್ವರೂಪ :

ಪ್ರಸ್ತುತ ಅಧ್ಯಯನ ಏಳು ಅಧ್ಯಾಯಗಳನ್ನು ಒಳಗೊಂಡಿದ್ದು, ಅವರ ಐದು ಕವನ ಸಂಕಲನಗಳನ್ನು ಅಧ್ಯಯನದ ತೆಕ್ಕೆಗೆ ಒಗ್ಗಿಸಿದೆ. ಮೊದಲ ಅಧ್ಯಾಯ ಅಧ್ಯಯನದ ಪ್ರವೇಶಿಕೆ. ಇದರಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವೈಧಾನಿಕತೆಯನ್ನು ವಿವರಿಸಲಾಗಿದೆ.

ಎರಡನೇ ಅಧ್ಯಾಯ ಇಟ್ಟಣ್ಣವರ ಕಾವ್ಯ ನಿರ್ವಚನ. ಒಬ್ಬ ಕವಿಯ ಕಾವ್ಯ ನಿರ್ವಚನದಲ್ಲಿ

---

೮. ಪ್ರೀತಿ : ಗಾಲಿ ಉಳಕೃತಿ : ಪುಟ-೧೮

ಸಮಗ್ರ ಕಾವ್ಯದ ಅವಲೋಕನದೊಂದಿಗೆ ಕವಿಯ ಬದುಕಿನ ಹೆಜ್ಜೆಗಳ ಪರಿಶೀಲನೆಯೂ ಮುಖ್ಯವಾಗುತ್ತದೆ. ಪ್ರಭಾವ-ಪ್ರೇರಣೆಗಳ ಸೆಲೆಗಳನ್ನು ಹುಡುಕಬೇಕು. ಇಟ್ಟಣ್ಣವರ ಬದುಕು ಮತ್ತು ಕಾವ್ಯ ಭಾವಸಂಗಮ. ಆದ್ದರಿಂದ ಅವರ ಬದುಕಿನ ನೆಲೆಗಳಲ್ಲಿ ಸೆಲೆಯೊಡೆದ ಕಾವ್ಯದ ಅಲೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಮೂರು, ನಾಲ್ಕು ಹಾಗೂ ಐದನೇ ಅಧ್ಯಾಯಗಳು ಅವರ ಕಾವ್ಯ ವಿಶ್ಲೇಷಣೆಗೆ ಮೀಸಲು. ಇಟ್ಟಣ್ಣವರ ಕಾವ್ಯ ವಿಶ್ಲೇಷಣೆಯ ಮುಖ್ಯ ನೆಲೆಗಳು ಮೂರು – .

೧. **ಪ್ರೇಮಸ್ಪಂದನ**

೨. **ಸಾಂಸ್ಥಿಕ ಸಂಕರ್ಷಣ**

೩. **ಸಾಂಸ್ಕೃತಿಕ ಘರ್ಷಣ**

ಮೂರನೇ ಅಧ್ಯಾಯ ಅವರ ಕಾವ್ಯದಲ್ಲಿ ಅಭಿವ್ಯಕ್ತಗೊಂಡ ಪ್ರೇಮದ ವಿವಿಧ ಮುಖಗಳನ್ನು ವಿವೇಚಿಸುತ್ತದೆ.

ನಾಲ್ಕನೇ ಅಧ್ಯಾಯವು ಕಾವ್ಯದ ಸಾಂಸ್ಥಿಕ ಒತ್ತಡಗಳನ್ನು ಅಳೆಯುತ್ತದೆ. ಗಾಲಿ ಉಳ್ಳತೈತಿ ಹಾಗೂ ಹೊತ್ತು ಮೂಡುವ ಸಮಯ ಸಂಕಲನಗಳ ಬಹಳಷ್ಟು ಕವಿತೆಗಳು ಸಾಮಾಜಿಕ ಒತ್ತಡಗಳನ್ನು ಧ್ವನಿಸುತ್ತವೆ. ಅವುಗಳನ್ನು ವರ್ಗೀಕರಣಕ್ಕೆ ಅಳವಡಿಸಿ ಪರಿಶೀಲಿಸಲಾಗಿದೆ.

ಐದನೇ ಅಧ್ಯಾಯ ಇಟ್ಟಣ್ಣವರ ಕಾವ್ಯ ವಿಶ್ಲೇಷಣೆ-೩ : ಸಾಂಸ್ಕೃತಿಕ ಘರ್ಷಣ ಅವಲೋಕನ. ಇಲ್ಲಿ ಕವಿಯ ಸಾಂಸ್ಕೃತಿಕ ತಲ್ಲಣಗಳನ್ನು ತೂಗಲಾಗುವುದು.

ಆರನೆಯ ಅಧ್ಯಾಯ ಇಟ್ಟಣ್ಣವರನ್ನು ನಮ್ಮ ಕಾವ್ಯ ಪರಂಪರೆಯಲ್ಲಿಟ್ಟು ನೋಡುವ ಯತ್ನ ಕಾವ್ಯ ಪರಂಪರೆಯ ಸ್ಥೂಲ ಅವಲೋಕನದೊಂದಿಗೆ ಇಟ್ಟಣ್ಣವರ ಕಾವ್ಯದ ಮೌಲ್ಯ ನಿರ್ಣಯ ಇಲ್ಲಿದೆ.

ಏಳನೇ ಅಧ್ಯಾಯ ಸಮಾರೋಪ. ಈ ಅಧ್ಯಯನದ ಒಟ್ಟು ಫಲಿತಗಳ ಸಂಕ್ಷಿಪ್ತ ರೂಪವಿದು. ಹೀಗೆ ಪ್ರಸ್ತುತ ಅಧ್ಯಯನವು ಇಟ್ಟಣ್ಣವರ ಕಾವ್ಯ ವಿವೇಚನೆಗೆ ಯೋಜನೆ ರೂಪಿಸಿಕೊಂಡಿದೆ.

## ೧.೩. ಅಧ್ಯಯನದ ವ್ಯಾಪ್ತಿ :

ಪ್ರಸ್ತುತ ಕಿರು ಮಹಾಪ್ರಬಂಧ ಡಾ॥ ಶ್ರೀರಾಮ ಇಟ್ಟಣ್ಣವರ ಅವರ ಕಾವ್ಯ ವಿವೇಚನೆಗೆ ಮಾತ್ರ ಸೀಮಿತಗೊಂಡಿದೆ. ಇಟ್ಟಣ್ಣವರ ಸಾಹಿತ್ಯ ವೈವಿಧ್ಯಮಯವಾದುದು. ಅವರು ಕನ್ನಡದ ಸಮರ್ಥ ಸಂಶೋಧಕರಲ್ಲೊಬ್ಬರು "ಕೃಷ್ಣ ಪಾರಿಜಾತ"ವೆಂಬ ಅವರ ಸಂಶೋಧನಾ ಮಹಾಪ್ರಬಂಧ ಕನ್ನಡ ಸಂಶೋಧನಾ ಇತಿಹಾಸದಲ್ಲಿ ಮೈಲಿಗಲ್ಲು. ಅವರು ಕನ್ನಡದ ಪ್ರಥಮ ನಟಿ ಕೌಜಲಗಿ ನಿಂಗಮ್ಮನನ್ನು ಹುಡುಕಿ ಕೊಟ್ಟವರು. ನಮ್ಮ ನಾಡಿನ ಬಹುದೊಡ್ಡ ವಿದ್ವಾಂಸರು; ಜನಪದ ತಜ್ಞರು. ಲಾವಣಿ ಸಾಹಿತ್ಯದ ಅಧ್ಯಯನದಲ್ಲಿ ಅವರದೇ ಕೊನೆ ಮಾತು. ಹೀಗೆ ಸಾಹಿತ್ಯದ ಹತ್ತು ಹಲವು ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ವಿವಿಧ ಪ್ರಕಾರಗಳ ಒಟ್ಟು ೧೭ ಕೃತಿಗಳನ್ನು ರಚಿಸಿರುವ ಇಟ್ಟಣ್ಣವರ ನಿಶ್ಚಿತವಾಗಿಯೂ ಮಹಾಪ್ರಬಂಧದ ಅಧ್ಯಯನಕ್ಕೆ ವಸ್ತುವಾಗಬಲ್ಲರು. ಆದರೆ ಈ ಸೀಮಿತ ಅವಧಿಯ ಅಧ್ಯಯನಕ್ಕೆ ಕಾವ್ಯ ವಿವೇಚನೆಯನ್ನು

ಮಾತ್ರ ಅಳವಡಿಸುವ ಅನಿವಾರ್ಯತೆ. ಆದ್ದರಿಂದ ಅದು ಪ್ರಸ್ತುತ ಅಧ್ಯಯನದ ವ್ಯಾಪ್ತಿಯೂ ಹೌದು, ಮಿತಿಯೂ ಹೌದು. ಈ ಎಲ್ಲ ಅಂಶಗಳನ್ನು ಮುಂದಿಟ್ಟುಕೊಂಡು ಪ್ರಸ್ತುತ ಕಿರು ಸಂಶೋಧನಾ ಪ್ರಬಂಧವನ್ನು ರೂಪಿಸಲಾಗಿದೆ.

## ೧.೪. ಅಧ್ಯಯನದ ವೈಧಾನಿಕತೆ :

ಕಾವ್ಯದ ಅಧ್ಯಯನ ಸುಲಭವಲ್ಲ. ಹಲವು ವಿಧಾನಗಳ ಮೂಲಕ ಕಾವ್ಯಕ್ಷೇತ್ರ ಪ್ರವೇಶಿಸಿದರೂ ಎಲ್ಲವೂ ಅಧ್ಯಯನದ ತೆಕ್ಕೆಗೆ ಸಿಕ್ಕುವುದಿಲ್ಲವೆಂಬುದು ಎಲ್ಲರಿಗೂ ವಿಧಿತ ವಿಷಯ. ಆದ್ದರಿಂದ ಇಲ್ಲಿ ಸರಳ ದಾರಿಗಳನ್ನೇ ಆಯ್ದುಕೊಳ್ಳಲಾಗಿದೆ.

ಡಾ॥ ಇಟ್ಟಣ್ಣವರ ಕವಿತೆಗಳನ್ನು ವರ್ಗೀಕರಿಸುವುದೇ ಮೊದಲ ಸವಾಲು. ವಿವಿಧ ನೆಲೆಗಳಿಂದ ಕವಿತೆಗಳನ್ನು ವಿಂಗಡಿಸಲು ಪ್ರಯತ್ನಿಸಿದರೂ ಕೆಲವು ಕವಿತೆಗಳು ವರ್ಗೀಕರಣದಿಂದ ಹೊರಗುಳಿಯುತ್ತವೆ. ಇದುವೇ ಕಾವ್ಯದ ವೈವಿಧ್ಯತೆ. ಆದ್ದರಿಂದ ಇಟ್ಟಣ್ಣವರ ಕಾವ್ಯ ವಿವೇಚನೆಗೆ ವೈಯಕ್ತಿಕ–ಸಾಂಸ್ಥಿಕ ಹಾಗೂ ಸಾಂಸ್ಕೃತಿಕ ನೆಲೆಗಳನ್ನು ಆಯ್ದುಕೊಳ್ಳಲಾಗಿದೆ. ಇದು ವಸ್ತುವಾಧಾರಿತ ವರ್ಗೀಕರಣ. ಪ್ರಬಂಧದ ಉದ್ದೇಶ ಕೂಡ ಅದೇ.

ಇಟ್ಟಣ್ಣವರ ಕಾವ್ಯದ ಕೇಂದ್ರ ಕಾಳಜಿ 'ಪ್ರೀತಿ'ಯಾಗಿರುವದರಿಂದ ಪ್ರೀತಿಯ ಮೀಮಾಂಸೆಗೆ ಒತ್ತು ನೀಡಲಾಗಿದೆ. ಅದರ ಎಲ್ಲ ಮುಖಗಳು ಹಾಗೂ ಪರಿಣಾಮ ತೀವ್ರತೆ ಮುಖ್ಯವಾಗಿ ಗಮನಿಸಲಾಗಿದೆ.

ಕವಿಯ ಸಮಗ್ರ ಕಾವ್ಯ ಅಧ್ಯಯನಕ್ಕೊಳಪಡುವಂತೆ ವೈಧಾನಿಕತೆ ರೂಪಿಸಲಾಗಿದೆ. ಈ ಚೌಕಟ್ಟಿನೊಳಗಡೆ ಪ್ರಸ್ತುತ ಅಧ್ಯಯನವನ್ನು ಸಂಯೋಜಿಸಲಾಗಿದೆ.

## ಅಧ್ಯಾಯ - ೨

# ಇಟ್ಟಣ್ಣವರ ಕಾವ್ಯ ನಿರ್ವಚನದ ನೆಲೆಗಳು

ಕವಿ ಮತ್ತು ಕಾವ್ಯ ಒಂದೇ ನುಲಿಯ ಎರಡು ಎಳೆಗಳು. ಅವು ಪರಸ್ಪರ ತಳುಕುಗೊಂಡು ಸಾಗುತ್ತವೆ. ಭಾರತೀಯ ಕಾವ್ಯ ಮೀಮಾಂಸೆ ಕವಿ ಮತ್ತು ಕಾವ್ಯದ ಸಂಬಂಧ ಜನ್ಮಾಂತರದ ಸಂಸ್ಕಾರ ವಿಶೇಷ ಎಂದು ಹೇಳುವುದು ಒತ್ತೊಟ್ಟಿಗಿರಲಿ, ಅದು ಈ ಬದುಕಿನ ಸಂಸ್ಕಾರ ವಿಶೇಷ ಎಂಬ ಮಾತು ಸತ್ಯವಾದುದು. 'ಕವಿಯ ಬದುಕಿನ ಹೊಳೆಯಲ್ಲಿ ಕವಿತೆಯದು ಮೀನಿನ ಹೆಜ್ಜೆ'. ಈ ಜಗತ್ತಿಗೆ ತನ್ನನ್ನೇ ತಾನು ತೆರೆದುಕೊಂಡ ಕವಿ, ಬೆಳದಿಂಗಳಿಂದ ಬದುಕು ತುಂಬುವ ಚಂದ್ರನಿಗಾಗಿ ಹಂಬಲಿಸುವನು.

ಪ್ರೀತಿ ಇಲ್ಲದೇ ಬರಡಾಗುತ್ತಿರುವ ಬದುಕಿನಲ್ಲಿ ಪ್ರೀತಿಯನ್ನು ತುಂಬಬೇಕೆನ್ನುವುದೇ ಕವಿಯ ಹಂಬಲ. ಆ ಹಂಬಲದ ಮನಸ್ಸಿನ ಮನುಷ್ಯನೇ ಕವಿ. ಈ ಮನಸ್ಸು ಸಂವೇದನಾಶೀಲವಾಗಿರುವುದರ ಜೊತೆಗೆ ಸೃಷ್ಟಿಶೀಲವೂ ಹೌದು. ಈ ಎರಡೂ ಅಂಶಗಳು ಇದ್ದಕ್ಕಿದ್ದಂತೆ ಎಂದಾದರೊಮ್ಮೆ ಕವಿಯ ವ್ಯಕ್ತಿತ್ವದಲ್ಲಿ ಸೇರುವುದಿಲ್ಲ. ಆ ಮನಸ್ಸೇ ಮೂಲತ: ಆ ಗುಣಗಳನ್ನು ಪಡೆದುಕೊಂಡಿರುತ್ತದೆ.

ಇಟ್ಟಣ್ಣವರದು ಸಂವೇದನಶೀಲ ಮನಸ್ಸು. ಅವರ ಬದುಕಿನ ಪರಿಸರವೇ ಅವರನ್ನು ಕವಿಯಾಗಿ ರೂಪಿಸುವಲ್ಲಿ ಮಹತ್ವದ ಪಾತ್ರ ವಹಿಸಿದೆ. ಗೋಕಾಕ ತಾಲೂಕಿನ ಯಾದವಾಡದ ಪರಿಸರವೇ ತುಂಬಾ ಸಂವೇದನಾಶೀಲವಾದುದು. ಅದರಲ್ಲೂ ಇಟ್ಟಣ್ಣವರ ಮನೆತನಕ್ಕೆ ಹಾಡುಗಾರಿಕೆ ತಲೆತಲಾಂತರಗಳಿಂದ ಬಂದ ವರ. ಈ ಮೊದಲು ಹೇಳಿದಂತೆ ಅವರ ಕುಟುಂಬದ ಸದಸ್ಯರೆಲ್ಲಾ ಹಾಡುಗಾರರು. ಹಾಲುಮತ ಜನಾಂಗಕ್ಕೂ ಹಾಡುಗಾರಿಕೆಗೂ ಬಿಡಿಸಲಾಗದ ನಂಟು. ಇದಕ್ಕೆ ಶ್ರೀರಾಮ ಇಟ್ಟಣ್ಣವರ ಕೂಡಾ ಹೊರತಾಗಿಲ್ಲ. ಈ ಹಿನ್ನೆಲೆಯಲ್ಲಿ ಈ ಕವಿಯ ಬದುಕಿನ ನೆಲೆಗಳನ್ನು ಗುರುತಿಸಿ ಕಾವ್ಯದ ಸೆಲೆಗಳನ್ನು ಶೋಧಿಸುವುದು ಹೆಚ್ಚು ಉಚಿತವೆನಿಸುವುದು. ಕಾವ್ಯದ ನಿರ್ವಚನವೆಂದರೆ ಮೀನಿನ ಹೆಜ್ಜೆಗಳ ಶೋಧ. ಕವಿ ಇಟ್ಟಣ್ಣವರ ಬದುಕು ಮತ್ತು ಕಾವ್ಯಗಳ ಸಂಬಂಧದ ಶೋಧ ಅವರ ಕಾವ್ಯ ನಿರ್ವಚನದ ಮೊದಲ ಹಂತ.

### ಬದುಕಿನ ನೆಲೆ ; ಕಾವ್ಯದ ಸೆಲೆ :

ಯಾದವಾಡದ ಇಟ್ಟಣ್ಣವರ ಮನೆತನ ಬೆವರಿನ ಬದುಕಿನ ಗೂಡು. ಹಾಡು ಮತ್ತು ದುಡಿಮೆ ಎರಡರಲ್ಲಿಯೂ ಭೇದ ಅರಿಯದ ಮನೆತನವಿದು. ಕವಿ ಶ್ರೀರಾಮ ಇಟ್ಟಣ್ಣವರ ಅಜ್ಜ ಬಸಪ್ಪ ಬಲು ದುಡಿಮೆಗಾರ. ಅವನಿಗೆ ಬೀರಪ್ಪ ರಾಮಪ್ಪ, ಇಟ್ಟಪ್ಪ ಲಕ್ಷ್ಮಣ, ಸಿದ್ದಪ್ಪ ಹಾಗೂ ಕರೆಪ್ಪ ಎಂಬ ಆರು ಜನ ಸಹೋದರರು. ಇವರಲ್ಲಿ ಇಬ್ಬರು ಕಳೆದು ನಾಲ್ವರು ಉಳಿದರು. ನಾಲ್ವರಲ್ಲಿ ಮೂವರು ವ್ಯವಸಾಯವನ್ನು ಬದುಕಿಗೆ ಒಗ್ಗಿಸಿಕೊಂಡರೆ, ಒಬ್ಬ ಕುರಿ ಕಾಯುವ ಕಾಯಕದಲ್ಲಿದ್ದನು. ಇವರಿಗೆ ಮೂಲತ: ೪೦ ಎಕರೆ (೧೦ ಕೂರಿಗೆ) ವ್ಯವಸಾಯದ ಭೂಮಿ, ಅನಂತರ ತಮ್ಮ ಬೆವರು ಸುರಿಸಿ ಹಣ ಗಳಿಸಿ ೫೦ ಕೂರಿಗೆ (೨೦೦

ಎಕರೆ) ಭೂಮಿ ಗಳಿಸಿದರು. ಈ ನಾಲ್ವರು ಸಹೋದರರ ಒಟ್ಟು ಭೂಮಿ ೬೦ ಕೂರಿಗೆ (೨೪೦ ಎಕರೆ). ಈ ಆಸ್ತಿ ಇಟ್ಟಣ್ಣವರ ಸಹೋದರರ ಶ್ರಮ ಸಂಸ್ಕೃತಿಯ ಸತ್ಫಲ.

ಈ ನಾಲ್ವರು ಸಹೋದರರಲ್ಲಿ ಬೀರಪ್ಪ ಹಿರಿಯವರು. ಅವರಿಗೆ ಇಬ್ಬರು ಪತ್ನಿಯರು. ಮೊದಲ ಪತ್ನಿ ಕರೆವ್ವ, ಎರಡನೆಯವಳು ದುಂಡವ್ವ. ಮೊದಲ ಪತ್ನಿಗೆ ಮೂವರು ಹೆಣ್ಣು ಮಕ್ಕಳು. ಅವಳು ತೀರಿಕೊಂಡ ನಂತರ ದುಂಡವ್ವನನ್ನು ಮದುವೆಯಾದರು. ಅವರಿಗೆ ಐವರು ಗಂಡು ಮಕ್ಕಳು ಹಾಗೂ ಮೂವರು ಹೆಣ್ಣು ಮಕ್ಕಳು ಜನಿಸಿದರು. ಇವರಲ್ಲಿ ಶ್ರೀರಾಮ ಹಿರಿಯವರು. ಇವರು ಜನಿಸಿದ್ದು ೧೯೪೯ ಮಾರ್ಚ ೨೫ ರಂದು.[೧] ಚಿಕ್ಕಪ್ಪ ರಾಮಪ್ಪನಿಗೆ ಮಕ್ಕಳಿರದ ಕಾರಣ ಶ್ರೀರಾಮರನ್ನು ದತ್ತು ಮಗನಾಗಿ ಸ್ವೀಕರಿಸಿದರು. ರಾಮಪ್ಪ ಡಾ॥ ಶ್ರೀರಾಮ ಇಟ್ಟಣ್ಣವರ ದತ್ತು ತಂದೆ, ನಾಗವ್ವ ದತ್ತು ತಾಯಿ.

ಶ್ರೀರಾಮ ಇಟ್ಟಣ್ಣವರ ತಂದೆ ಬೀರಪ್ಪ ಜನಪದ ಆಶುಕವಿ. ಅವರು ದುಡಿತದೊಂದಿಗೆ ಹಾಡುವುದನ್ನು, ಹಾಡು ಕಟ್ಟುವುದನ್ನು ರೂಢಿಸಿಕೊಂಡಿದ್ದರು. ಆದ್ದರಿಂದ ಮಗ ಶ್ರೀರಾಮ ಸಹಜವಾಗಿ ಹಾಡಿಗೆ ಒಲಿದರು. ಹಾಡು ಕಟ್ಟುವುದು, ಮನಸ್ಸಿನಲ್ಲಿ ಕಟ್ಟಿದ ಹಾಡಿಗೆ ಧ್ವನಿ ಕೊಟ್ಟು ಹಾಡುವುದು ಇಟ್ಟಣ್ಣವರ ಮನೆತನಕ್ಕೆ ದೇವರು ಕೊಟ್ಟ ವರ. ಆದರೆ ದುರ್ದೈವದ ಸಂಗತಿ ಎಂದರೆ ಬೀರಪ್ಪನ ಹಾಡುಗಳೆಲ್ಲ ಗಾಳಿಯಲ್ಲಿ ತೇಲಿ ಹೋದುದು. ಅಂದರೆ ಒಂದೂ ದಾಖಲಿತಗೊಳ್ಳಲಿಲ್ಲ. ಆ ವ್ಯಥೆ ಶ್ರೀರಾಮ ಇಟ್ಟಣ್ಣವರನ್ನೂ ಈಗ ಬಾಧಿಸುತ್ತಿದೆ. ಈ ಹಾಡು ಹಾಗೂ ದುಡಿತದ ಹಿನ್ನಲೆಯಲ್ಲಿ ಬೆಳೆದ ಈ ಕವಿಯ ಕಾವ್ಯದ ಮೂಲ ನೆಲೆಯನ್ನು ಅವರ ತಂದೆಯಲ್ಲಿಯೇ ಹುಡುಕಬೇಕಾಗುತ್ತದೆ.

ಜನಪದ ಕವಿಗಳು (ಹಾಡು ಕಟ್ಟುವ) ತಾವು ಕವಿಗಳೆಂದು ಭಾವಿಸಿಕೊಂಡು ಹೆಮ್ಮೆ ಪಡಲಿಲ್ಲ. ಅವರಿಗೆ ಕಾವ್ಯನಾಮವಿರಲಿಲ್ಲ. ಬರೆದು ಪ್ರಕಟಿಸಬೇಕೆಂಬ ಹಂಬಲವಿರಲಿಲ್ಲ. ತಮ್ಮ ಕವಿತೆ ತಲೆತಲಾಂತರ ಉಳಿಯಬೇಕೆಂಬ ಅಪೇಕ್ಷೆ ಇರಲಿಲ್ಲ. ಕಟ್ಟಿದ ಹಾಡನ್ನು ಹಲವು ಸಂದರ್ಭಗಳಲ್ಲಿ ಹಾಡಿ ಆನಂದಪಡುತ್ತಿದ್ದರು. ಕೇಳಿದವರು ಚನ್ನಾಗಿದೆ ಎಂದು ಪ್ರೋತ್ಸಾಹಿಸಿದರೆ ಹಿಗ್ಗುತ್ತಿದ್ದರು. ಕೀರ್ತಿ-ವಾರ್ತೆಗೆ ಮನಸೋಲದ ಅಪ್ಪಟ ಜಾನಪದೀಯ ಪರಂಪರೆಯಲ್ಲಿ ಹುಟ್ಟಿಕೊಂಡ ಕವಿ ಶ್ರೀರಾಮ ಇಟ್ಟಣ್ಣವರ.

ಅವರು ಶಾಲೆಗೆ ಹೋಗುವ ಮೊದಲೇ ಹಾಡು ಕೇಳಿದವರು; ಅಕ್ಷರ ಗೀಚುವ ಮೊದಲೇ ಹಾಡು ತೊದಲಿದವರು; ಕಾವ್ಯವೆಂದು ಗೊತ್ತಾಗುವ ಮೊದಲೇ ಕಾವ್ಯ ಕಟ್ಟಿದವರು. ಅವರ ಕಾವ್ಯ ಶಾಲೆ ಎಂದರೆ ದುಡಿಮೆ. ಅವರ ಬದುಕಿನ ಆನಂದದ ಸೆಲೆಯೆಂದರೆ ಆ ದುಡಿಮೆಯ ಮುದದಿಂದ ಹದಗೊಂಡ ಮನದಿಂದ ಹೊರಹೊಮ್ಮಿದ ಹಾಡು.

ಇವರು ೧೯೫೪ ರಲ್ಲಿ ಶಾಲೆಯಲ್ಲಿ ಮೊದಲ ಹೆಜ್ಜೆ ಇಟ್ಟರು. ಡಾ॥ ಶ್ರೀರಾಮ ಇಟ್ಟಣ್ಣವರಿಗೆ ಬಾಲ್ಯದಲ್ಲಿಯೇ ಸಾಹಿತ್ಯದಲ್ಲಿ ಆಸಕ್ತಿ. ಅದಕ್ಕೆ ಕಾರಣ ಅವರ ಅಣ್ಣ ಶಿವಣ್ಣ. ಅವರು ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದರು. ಅವರಿಗೆ ಓದಿನಲ್ಲಿ ಅಪಾರ ಆಸಕ್ತಿ. ಅವರ ಪುಸ್ತಕ ಪ್ರೀತಿಯೇ ಬಾಲಕ ಶ್ರೀರಾಮರಿಗೆ ಸಾಹಿತ್ಯದ ಮೊದಲ ಸ್ಫೂರ್ತಿ.

ಪ್ರಾಥಮಿಕ ಶಾಲೆಯಲ್ಲಿ ಸಭೆ ಸಮಾರಂಭ ಜರುಗಿದಾಗ ಶ್ರೀರಾಮ ತಮ್ಮ ಕಂಠ ಸಿರಿಯಿಂದ ಬಾಲ್ಯದಲ್ಲಿಯೇ ಮೋಡಿ ಮಾಡುತ್ತಿದ್ದರು. ಹೀಗಾಗಿ ಗುರುಗಳಿಗೂ ಅವರ ಮೇಲೆ ವಿಶೇಷ ಮಮತೆ.

೧. ಶಾಲೆಯ ದಾಖಲಾತಿಗಳಲ್ಲಿ ಅವರ ಜನ್ಮ ದಿನಾಂಕ : ೧೯೪೮ ಜೂನ ೧ ಎಂದು ತಪ್ಪಾಗಿ ನಮೂದಾಗಿದೆ.

ಯಾದವಾಡದ ಶ್ರೀಗುರು ನೀಲಕಂಠೇಶ್ವರ ಹೈಸ್ಕೂಲಿನಲ್ಲಿ ಪ್ರೌಢ ಶಿಕ್ಷಣ ಪಡೆಯುತ್ತಿದ್ದಾಗ ಶ್ರೀರಾಮರ ವಿಶೇಷ ಪ್ರತಿಭೆಯನ್ನು ಗುರುತಿಸಿದವರು ಶ್ರೀ ವ್ಹಿ.ಕೆ. ಗುಡಿ ಅವರು. ತುಂಬ ನಿಯತ್ತಿನ ಶಿಕ್ಷಕರು. ಕುಮಾರವ್ಯಾಸನ ಕಾವ್ಯ ಅವರ ಹೃದಯವನ್ನು ತುಂಬಿಕೊಂಡಿತ್ತು. ಇಟ್ಟಣ್ಣವರ ೮–೯ ನೆಯ ತರಗತಿಯಲ್ಲಿ ಓದುತ್ತಿದ್ದಾಗ ವ್ಹಿ. ಕೆ. ಗುಡಿ ಹೇಳುತ್ತಿದ್ದ ಕುಮಾರವ್ಯಾಸನ ಪದ್ಯಗಳು ತುಂಬಾ ಪರಿಣಾಮ ಬೀರಿದವು. ಕುಮಾರವ್ಯಾಸನ ಕಾವ್ಯದ ಪದ್ಯಗಳನ್ನು ಗಮಕ ಶೈಲಿಯಲ್ಲಿ ಪಾಠ ಮಾಡುತ್ತಿದ್ದ ಗುಡಿ ಇಟ್ಟಣ್ಣವರ ಎದೆಯಲ್ಲಿ ಕಾವ್ಯದ ಗುಡಿ ಕಟ್ಟಿ ಅಲ್ಲಿ ಕುಮಾರವ್ಯಾಸನನ್ನು ಪ್ರತಿಷ್ಠಾಪಿಸಿದವರೆಂದರೆ ತಪ್ಪಾಗಲಿಕ್ಕಿಲ್ಲ. ಈಗಲೂ ಕುಮಾರವ್ಯಾಸ ಇವರ ಪ್ರೀತಿಯ ಕವಿ. ಆತನ ರೂಪಕಗಳೆಂದರೆ ಪಂಚಪ್ರಾಣ.

ನಾರಣಪ್ಪನ ಕಾವ್ಯದ ಬಹುಭಾಗ ಕಂಠಪಾಠ. ಗದುಗಿನ ಭಾರತದ ಈ ವಿಶೇಷ ಆಕರ್ಷಣೆಗೆ ತಾವು ವ್ಹಿ. ಕೆ. ಗುಡಿ ಅವರಿಗೆ ಋಣಿಯಾಗಿರುವುದಾಗಿ ಅವರು ಮನಬಿಚ್ಚಿ ಹೇಳುವರು.

ಪ್ರೌಢ ಶಾಲಾ ಹಂತದಲ್ಲಿ ಇಟ್ಟಣ್ಣವರ ಪ್ರತಿಭೆಯನ್ನು ಸರಿಯಾಗಿ ಗುರುತಿಸಿದವರು ಗುಡಿಯವರೇ. ಸಂದರ್ಭ ಬಂದಾಗ ಹಾಡು ಹೇಳಲು, ಭಾಷಣ ಮಾಡಲು, ನಟಿಸಲು ಇವರನ್ನು ಪ್ರೋತ್ಸಾಹಿಸುತ್ತಿದ್ದರು.

ಕಲಿಕೆ ಮತ್ತು ದುಡಿತ ಅವರ ಬದುಕಿನಲ್ಲಿ ಹುರಿಗೊಂಡ ಎರಡು ಎಳೆಗಳು. ಹಳ್ಳಿಯ ವಾತಾವರಣದಲ್ಲಿ ಬೆಳೆದ ಇವರಿಗೆ ವ್ಯವಸಾಯ, ಪಶುಪಾಲನೆ, ವ್ಯಾಪಾರ ಚೆನ್ನಾಗಿ ತಿಳಿದಿದ್ದವು. ಇಟ್ಟಣ್ಣವರದು ಮೂಲತಃ ಒಕ್ಕಲುತನದ ಮನೆತನ. ಮನೆಯಲ್ಲಿ ೩೦೦ ರಷ್ಟು ಕುರಿಗಳು ಜೊತೆಗೆ ಊರಲ್ಲಿ ಇವರದೇ ಒಂದು ಬಟ್ಟೆ ಅಂಗಡಿ ಇತ್ತು. ಶಾಲೆಯ ಜೊತೆ ಜೊತೆಯಲ್ಲಿಯೇ ವ್ಯವಸಾಯ–ವ್ಯಾಪಾರಗಳೆರಡರಲ್ಲಿಯೂ ಪಳಗಿದರು. ಬಿಡುವಿನ ವೇಳೆಯಲ್ಲಿ ಕೆಲಮೊಮ್ಮೆ ವ್ಯವಸಾಯ ಮತ್ತೊಮ್ಮೆ ವ್ಯಾಪಾರದಲ್ಲಿ ನಿರತರಾಗುತ್ತಿದ್ದರು. ೮ ನೆಯ ತರಗತಿ ಓದುತ್ತಿದ್ದಾಗಲೇ ಅರಿವೆ ಅಂಗಡಿಯ ವ್ಯಾಪಾರ ಇವರ ಕೊರಳಿಗೆ ಬಿದ್ದಿತ್ತು.

ಒಕ್ಕಲುತನದಲ್ಲಿ ಸಂಭ್ರಮದ ಸಂದರ್ಭವೆಂದರೆ ಸುಗ್ಗಿ ಕಾಲ. ಸುಗ್ಗಿ ಎಂದರೆ ಮನೆ ಮಂದಿಗೆಲ್ಲಾ ಹಿಗ್ಗು, ಹಾಗೂ ಕೆಲಸ. ಒಕ್ಕಲುತನದ ರೀತಿಯೇ ಅದು. ಅಲ್ಲಿ ಯಾರಿಗೂ ಕೆಲಸವಿಲ್ಲದೆ ಇರಲು ಸಾಧ್ಯವಿಲ್ಲ. ಅದರಲ್ಲೂ ಸುಗ್ಗಿಯೆಂದರೆ ಸಂತಸದ ಒಕ್ಕಲು. ಬಾಲಕರಿಗಂತೂ ಖುಷಿಯೇ ಖುಷಿ. ಇಟ್ಟಣ್ಣವರ ಬಾಲ್ಯದ ಪ್ರೀತಿಯ ಹವ್ಯಾಸವೆಂದರೆ ಸುಗ್ಗಿಯಲ್ಲಿ ಕಣದಲ್ಲಿ ನಿಲ್ಲುವುದು, ಕಣಕ್ಕೆ ತೆನೆ ತರುವುದು, ತೆನೆ ತುಳಿಸುವುದು, ಮದ ಕೂಡಿಸುವುದು, ತೂರುವುದು, ರಾಶಿ ಮಾಡುತ್ತ ಹಾಡುವುದು. ೯ ನೆಯ ತರಗತಿಯಲ್ಲಿದ್ದಾಗಲೇ ಇಡಿ ರಾತ್ರಿ–ಬೆಳಗಾಗುವರೆಗೆ, ಜಿದ್ದು ಕಟ್ಟಿ ಹಂತಿಯ ಹಾಡುಗಳನ್ನು ಹಾಡುತ್ತಿದ್ದರು. ಹಾಡು ಒಂದೆಡೆ ಶ್ರಮದ ಪರಿಹಾರಕ್ಕೆ ಕಾರಣವಾದರೆ ಮತ್ತೊಂದೆಡೆ ಸಂತಸದ ಅಭಿವ್ಯಕ್ತಿಗೆ ಸೊಲ್ಲಾಗಿ ಚಿಮ್ಮುತ್ತಿತ್ತು. ಈಗಲೂ ಇಟ್ಟಣ್ಣವರ ಹಂತಿ ಹಾಡುಗಳ ಅಲಿಖಿತ ಮಹಾ ಸಂಪುಟ. ಈ ಹಿನ್ನೆಲೆಯಲ್ಲಿಯೇ ಅವರು ಜಾನಪದ ವಿದ್ವಾಂಸರಾಗಿ ಹೊರಹೊಮ್ಮಲು ಸಾಧ್ಯವಾಯಿತು. ಅವರ ಪ್ರೇಮ ಕಾವ್ಯದ ನಾಯಕಿ ನಾಯಕನಿಗೆ ಮದ ಮುರಿಯಲು ಕರೆಯುತ್ತಾಳೆ. 'ಮದ ಮುರಿಯುವುದು' ಒಂದು ಸುಂದರ ಜಾನಪದ ರೂಪಕ. ಮದ ಪದದ ಒಂದು ಅರ್ಥ ಸೊಕ್ಕು, ಗರ್ವ, ಮತ್ತೊಂದು ಅರ್ಥ ಸುಂಕಿನಿಂದ ಕೂಡಿದ ಕಾಳು ರಾಶಿ. ಮದ ಮುರಿಯುವುದೆಂದರೆ ರಾಶಿಗೆ ಚಾಲನೆ ನೀಡುವುದು.

ಇಟ್ಟಣ್ಣವರ ಬೆಳಗಾವಿಯ ಲಿಂಗರಾಜ ಕಾಲೇಜಿನಲ್ಲಿ ಬಿ.ಎ.ಪದವಿಗಾಗಿ ಓದುತ್ತಿದ್ದ ಸಂದರ್ಭವದು. ಬಿ.ಎ.ದ್ವಿತೀಯ ವರ್ಷದಲ್ಲಿ ಇದ್ದಾಗ ಮಹಾವಿದ್ಯಾಲಯದಿಂದ ಒಂದು ದಿನ

ವನಭೋಜನಕ್ಕೆ ಹೋದ ನೆನಪು ಅವರಿಗೆ. ಅಲ್ಲಿ ಕಾಲೇಜಿನ ವಿದ್ಯಾರ್ಥಿಗಳೆಲ್ಲಾ ಒಂದೆಡೆ ಸೇರಿದ್ದರು. ಆ ಕೂಟದಲ್ಲಿ ಇಟ್ಟಣ್ಣವರ ಮೆಳ್ಳಗಣ್ಣಿನ ತಮ್ಮ ಮಾವನ ಮಗಳನ್ನು ಕವಿತೆಯ ಮೂಲಕ ಪ್ರದರ್ಶಿಸಿದಾಗ ಕೂಡಿದ ಗೆಳೆಯರೆಲ್ಲಾ ನಕ್ಕಿದ್ದೇ ನಕ್ಕಿದ್ದು. ಆ ಕವಿತೆಯ ಹೆಸರು ಇದಿಮಾಯಿ. ಕವಿ ತಾನು ಮೆಚ್ಚಿದ ಹುಡುಗಿಯನ್ನು ಮದುವೆಯಾಗಲು ಯೋಚಿಸುತ್ತಾನೆ. ಆದರೆ ಅವರ ಅವ್ವ ತನ್ನ ಸಹೋದರನ ಮೆಳ್ಳಗಣ್ಣಿನ ಹುಡುಗಿಯನ್ನೇ ಮದುವೆಯಾಗುವಂತೆ ಒತ್ತಾಯಿಸುವ ಆ ಚಿತ್ರ ನವಿರು ಹಾಸ್ಯದಿಂದ ನಗೆಯ ಬುಗ್ಗೆ ಚಿಮ್ಮಿಸುವುದು.

ಗ್ರಾಮೀಣ ಬದುಕಿನಲ್ಲಿ ಸೌಂದರ್ಯಕ್ಕಿಂತ ಸಂಬಂಧಗಳ ಬೆಸುಗೆಯಲ್ಲಿ ಹೆಚ್ಚು ಒಲವು. ಅವರಿಗೆ ಬದುಕು ಎಂದರೆ ಸಹಬಾಳ್ವೆ. ಅದಕ್ಕಾಗಿ ಹುಟ್ಟುತ್ತಲೇ ಮದುವೆಯ ಸಂಬಂಧವನ್ನು ನಿರ್ಧರಿಸುವರು. ಪುಟ್ಟ ಹುಡುಗಿಗೆ ಇಂಥವನೇ ನಿನ್ನ ಗಂಡನೆಂದು ನಂಬಿಸಿ ಮತ್ತೆ ಮತ್ತೆ ಒಡಮು ಕಟ್ಟಿ ಹೆಸರು ಹೇಳಲು ಪ್ರೋತ್ಸಾಹಿಸುವರು. ಆ ಚಿತ್ರ 'ಇದಿಮಾಯಿ'ಯಲ್ಲಿ ಸಾಕ್ಷಾತ್ತಾಗಿ ಪಡೆಮೂಡಿತ್ತು.

ಆಧುನಿಕ ನಾಗರಿಕತೆಯ ಬೆಳಕಿನಲ್ಲಿ ಬೆಳೆದ ಕವಿಗೆ ಮನಸ್ಸಿಲ್ಲದ ಮದುವೆ ಬದುಕಿಗೆ ಮುದ ನೀಡುವ ಬದಲು ಮುಳುವಾಗಬಹುದೆಂದು ಆತಂಕ. ಅದಕ್ಕೆ ಮಾವನ ಮಗಳು 'ಇದಿಮಾಯಿ'ಯಾಗಿ ಕಾಣುತ್ತಾಳೆ.

ಗ್ರಾಮೀಣ ಬದುಕು ಹಾಗೂ ಹೊಸ ನಾಗರಿಕತೆಯ ಸಂಘರ್ಷವನ್ನು ಅಭಿವ್ಯಕ್ತಿಸುವ ಈ ಕವಿತೆ ಮೇಲ್ನೋಟಕ್ಕೆ ಹಾಸ್ಯದಿಂದಾಗಿ ಸರಳವಾಗಿ ಕಂಡರೂ ಆಂತರ್ಯದಲ್ಲಿ ಅನೇಕ ಸಾಂಸ್ಕೃತಿಕ ತಲ್ಲಣಗಳನ್ನು ತುಂಬಿಕೊಂಡಿದೆ.

ಹಾಗೆ ನೋಡಿದರೆ ಇದು ಇಟ್ಟಣ್ಣವರ ಮೊದಲ ಕವಿತೆಯಲ್ಲ. ಅವರು ಒಂಬತ್ತನೇ ತರಗತಿ ಓದುತ್ತಿದ್ದಾಗಲೇ ನೆಹರುಜಿಯವರನ್ನು ಕುರಿತು ಕವಿತೆ ಬರೆದಿದ್ದರು. ಪ್ರಾಯಶ : ಅದುವೇ ಅವರ ಮೊದಲ ಕವಿತೆ ಆಗಿರಬೇಕು. ಕವಿ ಇಟ್ಟಣ್ಣವರ ಕಾಲೇಜಿನಿಂದ ಹೊರ ಬಂದು ಕಾವ್ಯ ವೇದಿಕೆಯ ಮೇಲೆ ಮಿಂಚಿದ್ದು. ೧೯೭೧ ರಲ್ಲಿ. ಬೆಳಗಾವಿಯ ಟಿಳಕವಾಡಿಯ ಕಲಾ ಮಂದಿರದಲ್ಲಿ ಜಿಲ್ಲಾ ಸಾಹಿತ್ಯ ಸಮ್ಮೇಳನ ಜರುಗಿತ್ತು. ಡಾ॥ ಹಾ. ಮಾ. ನಾಯಕ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. ಸಮ್ಮೇಳನದ ಅಂಗವಾಗಿ ಹಮ್ಮಿಕೊಂಡ ಕವಿ ಗೋಷ್ಠಿಯಲ್ಲಿ ಕವಿಗಳು ತಮ್ಮ ತಮ್ಮ ಸರದಿಯಂತೆ ಕವಿತೆಗಳನ್ನು ಓದುತ್ತಿದ್ದರು. ಆ ಸಂದರ್ಭದಲ್ಲಿ ಇಟ್ಟಣ್ಣವರ ಅಲ್ಲಿ ಶ್ರೋತೃರಾಗಿದ್ದರು. ಗೆಳೆಯರು ಇಟ್ಟಣ್ಣವರನ್ನು ಕವಿತೆ ಓದುವಂತೆ ಪ್ರೇರೇಪಿಸಿದರು. ಆದರೆ ಕವಿಗೋಷ್ಠಿಯ ಕವಿಗಳ ಪಟ್ಟಿಯಲ್ಲಿ ಇವರ ಹೆಸರಿರಲಿಲ್ಲ. ಲೀಲಾವತಿ ತೋರಣಗಟ್ಟಿ ಇವರಿಗೆ ಅವಕಾಶ ಕೊಡಬೇಕೆಂದು ಹಟ ಹಿಡಿದರು. ಸಂಚಾಲಕರು ಒಪ್ಪಲಿಲ್ಲ. ತೋರಣಗಟ್ಟಿ ಪಟ್ಟು ಬಿಡಲಿಲ್ಲ. ಈ ವ್ಯಾಜ್ಯ ಕೃಷ್ಣಮೂರ್ತಿ ಪುರಾಣಿಕರ ಕಡೆಗೆ ಹೋಯಿತು. ಅವರು ಈ ಕವಿಗೆ ಅವಕಾಶ ಕೊಡಲು ಒಪ್ಪಿಕೊಂಡರು.

'ಸುತ್ತು ಮುತ್ತು ಹಳ್ಳಿ ತಿರಗಿ
ನೋಡಿsನ ಎಲ್ಲಾ
ನಿನ್ನ ಸಾಟಿ ನಿಲ್ಲುವಂಥಾ
ಹುಡಗಿsನ ಇಲ್ಲಾ.' ೨

೨. ಗರದಿ ಗಮ್ಮತ್ತ : ಹೊಳಿಸಾಲ ಬಳ್ಳಿ : ಪುಟ-೧

ಕಾಮನ ಬಿಲ್ಲಿನ ರತಿರೂಪದ ನಗೆಮಾರಿ ಹುಡುಗಿಯ ಚೆಲುವಿಕೆಯ 'ಗರದಿ ಗಮ್ಮತ್ತಿನ' ಕವಿತೆ ಕುಣಿಸಿ, ತುಂಬಿದ ಸಮ್ಮೇಳನದಲ್ಲಿ ಪ್ರೀತಿಯ ಜಳಕ ಮಾಡಿಸಿದ ಇಟ್ಟಣ್ಣವರ ಸಹೃದಯನ ಮನದೆತ್ತರಕ್ಕೆ ಬೆಳೆದರು.

ಪ್ರೀತಿಯ ಆ ಗರದಿ ಗಮ್ಮತ್ತು ಊರಿಗೆಲ್ಲ ತೋರಿಸಿದಾಗ ಎಲ್ಲರ ಬಾಯಿಯಲ್ಲೂ 'ಹೊಳಿಸಾಲ ಬಳ್ಳಿ'ಯ ಕವಿ ಮರೆದಾಡಿದನು. ಅಂದು ಗರದಿ ಗಮ್ಮತ್ತು ಹಾಗೂ 'ಇದಿಮಾಯಿ' ಎಂಬ ಎರಡು ಕವಿತೆಗಳನ್ನು ಓದಿ ಆ ಕವಿಗೋಷ್ಠಿಯ ಕವಿತಾಪುರುಷರಾದರು. ಆಗ ಕವಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ.ಎ. ಓದುತ್ತಿದ್ದರು. ಮರುವರ್ಷ ಅವರು ಈಗಿನ ಬಾಗಲಕೋಟ ಜಿಲ್ಲೆಯ ಬೀಳಗಿಯ ಶ್ರೀ ಸಿದ್ದೇಶ್ವರ ಪದವಿ ಪೂರ್ವ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ನೇಮಕಗೊಂಡರು. ಮರುವರ್ಷವೇ ಅಂದರೆ ೧೯೭೩ ರಲ್ಲಿ ಖ್ಯಾತ ಕವಿ ಚನ್ನವೀರ ಕಣವಿಯವರ ಮುನ್ನುಡಿಯೊಂದಿಗೆ ಇಟ್ಟಣ್ಣವರ 'ಗರದಿ ಗಮ್ಮತ್ತು', 'ಹೊಳಿಸಾಲ ಬಳ್ಳಿ'ಯಾಗಿ ಹೊಮ್ಮಿತ್ತು. 'ಹೊಳಿಸಾಲ ಬಳ್ಳಿ'ಯ ಮೊದಲ ಕವನವೇ 'ಗರದಿ ಗಮ್ಮತ್ತು.'

ಜಾನಪದೀಯ ಅಪ್ಪಟ್ಟ ಸಂವೇದನೆಗಳ ಕಾವಿನಲ್ಲಿ ಅಂಕುರಿಸಿದ 'ಹೊಳಿಸಾಲ ಬಳ್ಳಿ'ಯ ತುಂಬೆಲ್ಲ ಪ್ರೀತಿಯ ಕವಿತೆಗಳೇ ಹೆಚ್ಚು. "ಗಂಡು ಹೆಣ್ಣಿನ ಕಾಮ-ಪ್ರೇಮ ಸಂಬಂಧದ ವಿವಿಧ ಸ್ವರೂಪ, ದಾಂಪತ್ಯದ ಸರಸ ವಿರಸ ಇಲ್ಲಿನ ಹೆಚ್ಚಿನ ಕವಿತೆಗಳ ವಸ್ತು. ಜಾನಪದದ ಮಾತು ಸ್ವಭಾವ ಆಸೆ-ಆಕಾಂಕ್ಷೆಗಳ ಗಾಢವಾದ ಪರಿಚಯದಿಂದ ತಾದಾತ್ಮ್ಯ ಹೊಂದಿ ಅವರ ಭಾವಕ್ಕೆ ನುಡಿಗೊಟ್ಟಿರುವುದು ಇಲ್ಲಿಯ ಮೇಲ್ಮೆ"[೩] ಉತ್ತರ ಕರ್ನಾಟಕದಲ್ಲಿ ಆನಂದಕಂದರ ನಲ್ವಾಡುಗಳ ನಂತರ ಪ್ರೀತಿಯ ಅಸಲು ಸಂಚಲನವನ್ನುಂಟು ಮಾಡಿದ ಮೊದಲ ಕವನ ಸಂಕಲನ 'ಹೊಳಿಸಾಲ ಬಳ್ಳಿ'.

ಅವರ ಕಾವ್ಯ ಪ್ರೇರಣೆಯ ಮೊದಲ ಬಿಂದು ಅವರ ತಂದೆಯಾದರೆ, ಅನಂತರ ಅವರಿಗೆ ಕಾವ್ಯದ ಹುಚ್ಚು ಹಿಡಿಸಿದವರು ಗೆಳೆಯರು. ಅದಕ್ಕಾಗಿ ಅವರು ತಮ್ಮ 'ಹೊಳಿಸಾಲ ಬಳ್ಳಿ'ಯನ್ನು ತಮ್ಮ ಸ್ನೇಹಿತರಿಗೆ ಅರ್ಪಿಸಿದುದನ್ನು ಗಮನಿಸಬೇಕು. ಪ್ರೇರಣೆಯ ಮೂರನೆಯ ನೆಲೆ ಸಹೃದಯ ಸ್ಪಂದನೆ. ಅದನ್ನವರು 'ಹೊಳಿಸಾಲ ಬಳ್ಳಿ'ಯ ಮೊದಲ ಮುದ್ರಣದ ಅರಿಕೆಯಲ್ಲಿ ಬಿಚ್ಚಿಟ್ಟಿದ್ದಾರೆ. 'ಹೊಳಿಸಾಲ ಬಳ್ಳಿ'ಯ ಕೆಲವು ಕವನಗಳನ್ನು ಬೆಳಗಾವಿ ಮತ್ತು ಧಾರವಾಡ ಜಿಲ್ಲೆಯ ಸಾಹಿತ್ಯ ಸಮ್ಮೇಳನಗಳಲ್ಲಿ ಹಾಗೂ ಬೇರೆ ಅನೇಕ ಸಮಾರಂಭಗಳಲ್ಲಿ ಹಾಡಿ ತೋರಿಸಿದಾಗ ಜನತೆ ತೋರಿದ ಉತ್ಸಾಹ, ನೀಡಿದ ಉತ್ತೇಜನ ಪ್ರಕಟಣೆಗೆ ಧೈರ್ಯ ತಂದು ಕೊಟ್ಟವು. [೪]

ಇವು ಮೂರು ಈ ಕವಿಯ ಕಾವ್ಯೋದಯದ ಬಹುಮುಖ್ಯ ನೆಲೆಗಳು. ಮೊದಲನೆಯದು ಉತ್ಸಾಹದ ನೆಲೆ. ಅದು ಪರಂಪರಾಗತವಾಗಿ ಅಜ್ಜ-ತಂದೆಯವರಿಂದ ಬಳುವಳಿಯಾಗಿ ಬಂದದ್ದು. ಎರಡನೆಯದು ಪ್ರೋತ್ಸಾಹಕ ನೆಲೆ. ಗೆಳೆಯರ ಪ್ರೇರಣೆಯಿಂದ ಸಿಕ್ಕಿದ್ದು. ಮೂರನೆಯದು ಪುರಸ್ಕಾರ ನೆಲೆ. ಸಹೃದಯರಿಂದ ಪ್ರಮಾಣಿತಗೊಂಡಿದ್ದು. ಇವು ಇಟ್ಟಣ್ಣವರ ಕಾವ್ಯ ನಿರ್ವಚನದಲ್ಲಿಯೂ ಪ್ರಮುಖವಾಗುತ್ತವೆ.

---

೩. ಹೊಳಿಸಾಲ ಬಳ್ಳಿ : ಮುನ್ನುಡಿ ಪು-iv
೪. ಹೊಳಿಸಾಲ ಬಳ್ಳಿ : ಅರಿಕೆ ಪು-x

ಅವರ ಒಟ್ಟು ಕವಿತೆಗಳ ಹಿಂದಣ ಸಂವೇದನೆಗಳನ್ನು ಮೂರು ಪಾತಳಿಗಳಲ್ಲಿ ಸೇರಿಸಬಹುದು.

೧. **ಭಾವುಕ**

೨. **ಸಾಮಾಜಿಕ**

೩. **ವೈಚಾರಿಕ**

ಕವಿತೆ ಭಾವದ ಹಕ್ಕಿಯ ಹಾಡು. ಇಟ್ಟಣ್ಣವರ ಹಾಡುಹಕ್ಕಿ. ಅದಕ್ಕೆ ಅವರು ಜನಪದ ಕಾವ್ಯದ ಮಾದರಿಯಲ್ಲಿ ಪ್ರಣಯ ಗೀತೆಗಳನ್ನು ರಚಿಸಿ, ಹಾಡಿ, ಜನರನ್ನು ಆನಂದಿಸಿ, ಆನಂದಿತರಾದರು. ಅವರಿಗೆ ಕಾವ್ಯವು ಕಟ್ಟುವ ಕ್ರಿಯೆಯಾಗಲಿಲ್ಲ; ಹಾಡುವ ಹಿಗ್ಗಾಗಿತ್ತು. ಅಭಿವ್ಯಕ್ತಿಯ ತಾಂತ್ರಿಕ ಕಸರತ್ತಾಗಲೀ, ರೂಪದ ಜಿಜ್ಞಾಸೆಯಾಗಲೀ ಅಲ್ಲಿ ಕಾಣುವುದಿಲ್ಲ. ಗ್ರಾಮೀಣ ಸಂವೇದನೆಗಳಂತೆ ಭಾವದಲ್ಲಿ ಭಾವುಕತೆ; ಅಭಿವ್ಯಕ್ತಿಯಲ್ಲಿ ಉತ್ಸುಕತೆ. ಅವರು ಪ್ರೀತಿಯ ವಿವಿಧ ಮುಖಗಳನ್ನು ಪರಿಚಯಿಸಿದರೂ, ಆಧುನಿಕ ಚಿಂತನೆಯ ಬೆಳಗಿನಲ್ಲಿ ಬೆಳಗುವುದಿಲ್ಲ. ಪಾರಂಪರಿಕ ವಿಚಾರಗಳನ್ನೇ ವಿನ್ಯಾಸಗೊಳಿಸುತ್ತಾರೆ. ಇದರರ್ಥ ಅಲ್ಲಿ ಹೊಸತನ ಕಾಣುವುದಿಲ್ಲವೆಂದು ಹೇಳಲಾಗದು. ಪ್ರೀತಿ ಅತಿಯಾದಾಗ ಒಲವು ತಿಳಿಯಲು ಸಾಧ್ಯವಾಗುವುದಿಲ್ಲ. ಅದು ಅವರ ಉದ್ದೇಶವೂ ಆಗಿರಲಿಲ್ಲ. ಜನತೆಯೆಡೆಗೆ ಕಾವ್ಯ ಒಯ್ಯುವುದು ಅವರ ಗುರಿಯಾಗಿತ್ತು. ಅದು ಸಾಧ್ಯವೂ ಆಯಿತು. ಇಟ್ಟಣ್ಣವರ ತರುವಾಯ ಇನ್ನುವರೆಗೆ ಅದು ಯಾರಿಗೂ ಸಾಧ್ಯವಾಗಲಿಲ್ಲ.

ಸಾಮಾಜಿಕ ಒತ್ತಡದಿಂದ ಮೂಡಿದ ಕಾವ್ಯದ ಸ್ವರೂಪ ಬೇರೆ: ಭಾವ ಒತ್ತಡದಿಂದ ಮೂಡುವ ಕಾವ್ಯದ ಸ್ವರೂಪ ಬೇರೆ. ಇಟ್ಟಣ್ಣವರದು ಭಾವದ ಸ್ವಭಾವದಲ್ಲಿ ಒಡಮೂಡುವ ಅನುರಕ್ತ ಕಾವ್ಯ ಅದು ಮನ ಗೆಲ್ಲುವುದು ಲಯದ ಗತ್ತಿನಿಂದ ಹೊರತು ಚಿಂತನೆಯ ಮೂಲಕವಲ್ಲ. ಅವರಿಗೂ ತಿಳಿದಿತ್ತು. ಅದಕ್ಕಾಗಿ ಅವರು ತಮ್ಮ ಎರಡನೇ ಕಾವ್ಯ ಸಂಕಲನದಲ್ಲಿ ಸಾಮಾಜಿಕ ವಲಯಕ್ಕೆ ಬರಲು ಪ್ರಯತ್ನಿಸಿದರು. ಆದರೂ ಅಲ್ಲಿಯೂ ಭಾವುಕ ನೆಲೆಯೇ ವಿಜೃಂಬಿಸಿತು. ಸಾಮಾಜಿಕ ಪ್ರಜ್ಞೆ ಗೌಣಗೊಂಡಿತು. ಆಗ ಮತ್ತೆ ಪ್ರೇಮದ ಹಾಡು ಬರೆದರು. ಬಾಳಸಂಗಾತಿ ಸರೋಜಾ ಅವರಿಗೆ ಅರ್ಪಿಸಿದರು. ಅಂದರೆ ಪ್ರೇಮಗೀತೆ ಪರಂಪರೆಯನ್ನು ಮುಂದುವರೆಸಿದರು. ಅವರ ಕಾವ್ಯ ವೈಚಾರಿಕತೆಯ ಸ್ಪರ್ಶ ಪಡೆದದ್ದು "ಹೊತ್ತು ಮೂಡುವ ಸಮಯ" ಸಂಕಲನದಲ್ಲಿ. 'ಕವಿತಾ ಹುಟ್ಟತೈತಿ' ಕವಿತೆ ಅವರ ಕಾವ್ಯ ಮೀಮಾಂಸೆ.

ಕಾವ್ಯವನ್ನು ಕವಿಯ ಬದುಕಿನಿಂದ ಬೇರ್ಪಡಿಸಿ ನೋಡುವುದು ಉಚಿತವಲ್ಲ. ಕವಿಯ ಬದುಕಿನ ಹಿನ್ನಲೆ ಕಾವ್ಯದ ವಿಶ್ಲೇಷಣೆಗೆ ಪೂರಕ. ಪಠ್ಯಕೇಂದ್ರಿತ ವಿಮರ್ಶೆ ಆಂಶಿಕವಾಗುತ್ತದೆ. ತತ್ವಪದಕಾರರ ಬದುಕಿಗೂ ಪ್ರೇಮಗೀತೆಗಳ ಕವಿಗಳ ಬದುಕಿಗೂ ಖಂಡಿತವಾಗಿಯೂ ವ್ಯತ್ಯಾಸವಿರುವುದು. ಪ್ರೇಮ ಕವಿತೆ ಸಂಸಾರ ಸಂತೃಪ್ತಿಯ ನಿನಾದ. ಇಟ್ಟಣ್ಣವರದು ಸಂತೃಪ್ತಿಯ ಸಂಸಾರ. ಅವರ ದಾಂಪತ್ಯ ಅನ್ಯೋನ್ಯ. ಮಡದಿ ಹಾಗೂ ಇಬ್ಬರ ಮಕ್ಕಳ ತುಂಬು ಕುಟುಂಬ. ಕೊರಗು-ಕೊರತೆಯಿಲ್ಲದ ಬಾಳು. ಸಂಶೋಧನೆಯ ಗೀಳು ಅವರ ಕಾವ್ಯಕ್ಕೆ ತೊಡಕಾದುದುಂಟು. ಈ ಕಾರಣದಿಂದಲೇ ಅವರ ಕಾವ್ಯ ಸಂಕಲನಗಳ ಸಂಖ್ಯೆಗೆ ಮಿತಿಯುಂಟಾಯಿತು. ಇದರೊಂದಿಗೆ ಜನಪದ ಸಂಘಟನೆಗಳೊಂದಿಗೆ ತೀವ್ರ ತೊಡಗಿಸಿಕೊಂಡದ್ದೂ ಸೃಜನತೆಗೆ ಅಡ್ಡಿಯಾಗಿರಬಹುದು. ಬೀಳಗಿಯ ಸ್ನೇಹ ಸೌರಭ ಸಂಘ, ತಾಲೂಕು ಕ. ಸಾ. ಪ. ಘಟಕ. ಕಂದಗಲ್ ಹಣಮಂತರಾಯ ಸ್ಮಾರಕ ರಂಗವೇದಿಕೆ ಮೊದಲಾದ ಸಾಹಿತ್ಯ ವೇದಿಕೆಗಳೊಂದಿಗೆ ಕ್ರಿಯಾಶೀಲರಾಗಿದ್ದರು. ಒಟ್ಟಾರೆ ಇಟ್ಟಣ್ಣವರ ಕ್ರಿಯಾಶೀಲತೆಯು ಸೃಜನ-

ಸಂಘಟನೆ–ಸಂಶೋಧನೆಗಳಲ್ಲಿ ಹಂಚಿಕೆಯಾಯಿತು. ಕಾವ್ಯದಲ್ಲಿಯೇ ಮನಸ್ಸು ಕೇಂದ್ರೀಕರಿಸಲು ಸಾಧ್ಯವಾಗಲಿಲ್ಲ. ಆ ಮಟ್ಟಿಗೆ ಕಾವ್ಯಕ್ಕೆ ಸ್ವಲ್ಪ ಹಿನ್ನಡೆಯಾದರೂ ಮೂಲತ: ಅವರದು ಕವಿ ಮನಸ್ಸು ಎಂಬುದರಲ್ಲಿ ಎರಡು ಮಾತಿಲ್ಲ. ಕಾವ್ಯ ಅವರ ಮೊದಲ ಆದ್ಯತೆ, ಎರಡನೆಯದು ಸಂಶೋಧನೆ. ಇಟ್ಟಣ್ಣವರ ಸಂಶೋಧಕರಾಗಿ ವಿದ್ವಾಂಸರ ಗಮನ ಸೆಳೆದರು ; ಕವಿಯಾಗಿ ಜನಸಾಮಾನ್ಯರ ಪ್ರೀತಿಗೆ ಪಾತ್ರರಾದರು ; ಅಧ್ಯಾಪಕರಾಗಿ ವಿದ್ಯಾರ್ಥಿಗಳ ಒಲವು ಗಳಿಸಿದರು ; ಸಂಘಟಕರಾಗಿ ಸಾಹಿತ್ಯದ ಸೇವೆ ಮಾಡಿದರು. ಇವು ಅವರ ಸಾಂಸ್ಕೃತಿಕ ವ್ಯಕ್ತಿತ್ವದ ನಾಲ್ಮೊಗಗಳು.

ಕವಿ ಇಟ್ಟಣ್ಣವರ ಬದುಕಿನ ವಿವಿಧ ಸ್ತರಗಳನ್ನು ಅವರ ಕಾವ್ಯ ನಿರ್ವಚನದ ಅಧ್ಯಯನಕ್ಕೆ ಹಿನ್ನಲೆಯಾಗಿ ಇಟ್ಟುಕೊಳ್ಳುವುದು ಹೆಚ್ಚು ಸಮರ್ಪಕ ಹಾಗೂ ಔಚಿತ್ಯಪೂರ್ಣವೆನಿಸುತ್ತದೆ.

## ಅಧ್ಯಾಯ – ೩

# ಇಟ್ಟಣ್ಣವರ ಕಾವ್ಯ ವಿಶ್ಲೇಷಣೆ – ೧ : ಪ್ರೇಮ ಸ್ಪಂದನ

ಕಾವ್ಯ ಬದುಕಿನ ಭಾವ ಬುರಗು. ಅದಕ್ಕೆ ಇಂಥದ್ದೇ ವಸ್ತು ಇರಬೇಕೆಂಬ ನಿರ್ಬಂಧ ಸಲ್ಲದು. ಕವಿ ತನ್ನ ಕಣ್ಣಿಗೆ ಕಂಡದ್ದು, ಮನಸ್ಸಿಗೆ ತಟ್ಟಿದ್ದು, ಮೆದುಳಿಗೆ ಮೂಡಿದ್ದು ಹತ್ತು ಹಲವು ವಿಷಯಗಳನ್ನು ಕಾವ್ಯಕ್ಕೆ ವಸ್ತುವಾಗಿಸುತ್ತಾನೆ. ತೀರ ವೈಯಕ್ತಿಕ ವಿಷಯದಿಂದ ಮೊದಲುಗೊಂಡು ಜಾಗತೀಕರಣದವರೆಗೂ ಬೆಳೆದ ತನ್ನ ಚಿಂತನೆಯನ್ನು ಕಾವ್ಯಕ್ಕೆ ಒಗ್ಗಿಸುವನು. ಕಾವ್ಯ ಜಗತ್ತು ವೈವಿಧ್ಯಮಯ ಮತ್ತು ವಿಶಿಷ್ಟ. ಹೀಗಾಗಿ ಯಾವುದೇ ಕವಿಯ ಸಮಗ್ರ ಕಾವ್ಯದ ಅಧ್ಯಯನದಲ್ಲಿ ಕವಿತೆಗಳ ವರ್ಗೀಕರಣ ಅಭ್ಯಾಸಿಗನಿಗೆ ಮೊದಲ ಸವಾಲು. ಎಷ್ಟು ಜಾಗರೂಕತೆಯಿಂದ ಕವಿತೆಗಳನ್ನು ವಿಭಾಗಿಸಿದರೂ ಕೆಲವು ಬಿಡಿ ಕವಿತೆಗಳು ಉಳಿದೇ ಉಳಿಯುತ್ತವೆ. ಅವು ಯಾವ ವಿಭಾಗದಲ್ಲಿಯೂ ಸೇರುವುದಿಲ್ಲ. ಇದುವೇ ಮನುಷ್ಯನ ಮನಸ್ಸಿನ ವಿಶೇಷ. ಕವಿತೆಗಳು ಕವಿ ಮನಸ್ಸಿನ ಸಂವೇದನೆಗಳು. ಈ ಸಂವೇದನೆಗಳ ಸ್ವರೂಪವನ್ನು ಸ್ಥೂಲವಾಗಿ ನಿರ್ಧರಿಸಬಹುದು. ಅವುಗಳ ಬಹುಮುಖ್ಯ ನೆಲೆಗಳನ್ನು ಗುರುತಿಸಬಹುದು. ಡಾ॥ ಶ್ರೀರಾಮ ಇಟ್ಟಣ್ಣವರ ಸಂವೇದನೆಯ ಬಹುಮುಖ್ಯ ಸ್ಪಂದನಗಳು ಮೂರು.

೧. **ಪ್ರೇಮ ಸ್ಪಂದನ**

೨. **ಸಾಂಸ್ಥಿಕ ಸಂಕರ್ಷಣ**

೩. **ಸಾಂಸ್ಕೃತಿಕ ಘರ್ಷಣ**

ಇವುಗಳನ್ನು ಬಿಡಿಬಿಡಿಯಾಗಿ ನೋಡುವುದಕ್ಕಿಂತ ಇಡಿಯಾಗಿಯೇ ನೋಡಬೇಕು. ಏಕೆಂದರೆ ಅವುಗಳನ್ನು ಪ್ರತ್ಯೇಕಿಸುವುದೆಂದರೆ ಮನಸ್ಸಿನ ಹಚ್ಚಡದ ಎಳೆ ಎಳೆಗಳನ್ನು ಬಿಡಿಸಿದಂತೆ. ಹೀಗೆ ಎಳೆ ಬಿಡಿಸಿದರೆ ಅಲ್ಲಿ ಹಚ್ಚಡವೇ ಉಳಿಯುವುದಿಲ್ಲ. ಆದರೆ ಸಂವೇದನೆಗಳ ಸತ್ವ–ಮೊತ್ತ ತಿಳಿಯಲು ನಮ್ಮ ದೃಷ್ಟಿಯನ್ನು ಒಂದೊಂದರ ಮೇಲೆ ಕೇಂದ್ರೀಕರಿಸುವುದು ಅನಿವಾರ್ಯವಾಗುತ್ತದೆ.

ಈ ವಿಭಾಗಗಳು ಸ್ಥೂಲವೆನಿಸಿದರೂ ಒಳಹೊಕ್ಕು ನೋಡಿದಾಗ ಹಲವು ಆಯಾಮಗಳನ್ನು ಒಳಗೊಂಡಿರುವುದು ಸತ್ಯ. ಭೂಮಿ ಬೀಜವನ್ನು ನುಂಗಿದಾಗ ಹಸಿರು ಪಲ್ಲವಿಸುತ್ತದೆ. ಈ ಪಲ್ಲವಿಯೇ ಪ್ರೇಮ. ಬೀಜ ಮೊಳೆತು, ಎಲೆದೆಗೆದು, ಬೆಳೆದು, ಸುಳಿಗಟ್ಟುವುದು ಪ್ರೀತಿಯ ತೊಟ್ಟಿಲಲ್ಲಿಯೇ ಮತ್ತದಕ್ಕೆ ಬೀಜಗಳು ಮೂಡುವವು. ಮರ ಬೀಜವಾಗಿ ಭೂಮಿ ಹುಡುಕಿ ಮತ್ತೆ ಮೂಡಲು ಹವಣಿಸುವುದು ಪ್ರೇಮ ತತ್ವ.

ಪ್ರೀತಿ ಒಂದು ವೃತ್ತ. ಅದಕ್ಕೆ ತುದಿ ಮೊದಲೆಂಬುದು ಇಲ್ಲ. ಇದರಂತೆಯೇ ಸಾಂಸ್ಥಿಕ ಜವಾಬ್ದಾರಿ ಹಾಗೂ ಸಾಂಸ್ಕೃತಿಕ ವಾರಸುದಾರಿಕೆ ಪ್ರೀತಿಯ ಜೊತೆ ಜೊತೆಯಲ್ಲಿಯೇ ಮೂಡುತ್ತವೆ, ಬೆಳೆಯುತ್ತವೆ. ಹೂ ಬಿಡುತ್ತವೆ, ಬೀಜಗಟ್ಟುತ್ತವೆ.

ವ್ಯಕ್ತಿಯ ಸುತ್ತ ಕುಟುಂಬ, ಕುಟುಂಬದ ಸುತ್ತ ಸಮಾಜ ನಿರ್ಮಾಣಗೊಳ್ಳುತ್ತ ಹೋಗುತ್ತದೆ.

**ಎಂದಿನಿಂದ ಊರಿವೆ**
**ಎಷ್ಟೊಂದು ಮನುಷ್ಯ ಹೆಜ್ಜೆಗಳು**
**ಈ ಭೂಮಿ ಮೇಲೆ !**
**ಮಾನವನಾದಿಯಿಂದ ವರ್ತಮಾನದವರೆಗೆ**
**ಲೆಕ್ಕವಿಟ್ಟವರಾರು?**

.............................................

**ಬರೆದಿಟ್ಟರೆ ಯಾರಾದರೂ**
**ಹೆಜ್ಜೆ ಹುಣ್ಣಾದುದನು ?**
**ನೋಡಿದರೇ ಯಾರಾದರೂ**
**ಮಿಡುಕಿ ಮಣ್ಣಾದುದನು ?** [೧]

ಈ ಕವಿಯ ಹೆಜ್ಜೆಗಳ ಪರಿಶೀಲನೆಯೇ ಕಾವ್ಯ ವಿವೇಚನೆ. ಮನುಷ್ಯ ಶೋಧ ಕಾವ್ಯದ ಹವ್ಯಾಸ. ಅದೊಂದು ಸಾಂಸ್ಕೃತಿಕ ಹುಡುಕಾಟ. ಮನುಷ್ಯನು ಇಟ್ಟ ಹೆಜ್ಜೆಗಳನ್ನು ಸಮೀಕ್ಷಿಸಿ, ಬದುಕಿನ ಅರ್ಥ ಚಿಂತಿಸುತ್ತದೆ.

ಮನುಷ್ಯ ಕಾಡಿನ ಪ್ರಾಣಿಯಲ್ಲ, ಅವನು ತನ್ನ ಸುತ್ತ ಒಂದು ವಲಯ ನಿರ್ಮಿಸಿಕೊಳ್ಳುತ್ತಾನೆ. ಕುಟುಂಬದ ಸದಸ್ಯನಾದವನು ಸಮುದಾಯದ ಅಂಗವಾಗುತ್ತಾನೆ. ಸಮಾಜದ ಕೆಳಗೆ ತಲೆತೂರಿಸುತ್ತಾನೆ. ಸುರಿವ ಮಳೆಯಲ್ಲಿ ಒಂದೇ ಕೊಡೆಯ ಕೆಳಗೆ ಹಲವರು ನಡೆಯುವಾಗ ಅವರ ಮೈ ತೋಯುವುದು ಸಾಮಾನ್ಯ. ಆದರೆ ಮೆತ್ತಗೆ ಮೈ ಒತ್ತೊತ್ತಿ ನಡೆಯುವುದರಲ್ಲಿಯೇ ಸಂತೋಷ.

**'ನಿನ್ನ ಮೈ ತೊಯ್ಯುತ್ತಿದೆಯೆ ?**
**ನಿನ್ನ ಮೈ ತೊಯ್ಯುತ್ತದೆಯೆ ?**
**ಹೆಜ್ಜೆ ಹೆಜ್ಜೆಗೂ ಪ್ರಶ್ನೆಗಿಲ್ಲ ಕೊರತೆ**
**ಮೆತ್ತಗೆ ಮೈ ಒತ್ತೊತ್ತಿ ನಡೆಯುತ್ತಿದ್ದರೆ**
**ಮೆಲ್ಲಗೆ ಸೆಲೆಯೊಡೆದು ತುಂಬಿಕೊಳ್ಳುವ**
**ಅಂತ:ಕರಣದ ಒರತೆ.'** [೨]

ಇದು ಈ ಕವಿಯ ಸಾಂಸ್ಥಿಕ ಪ್ರಜ್ಞೆ. ಸಮಾಜದಲ್ಲಿ ಶಾಂತಿ ನೆಲೆಯೂರಬೇಕೆಂಬುದು ಬಹುಜನರ ಆಶಯ. ಕವಿಗಳಂತೂ ಶಾಂತಿಯ ಉಪಾಸಕರು. ಆದರೆ ಸಮಾಜದಲ್ಲಿ ಸಮಾದಾನದ ಬದಲು ಅಸಮಾದಾನದ ಸಂಕರ್ಷಣ ಹೆಚ್ಚುತ್ತದೆ. ಡಾ॥ ಇಟ್ಟಣ್ಣವರ ಕಾವ್ಯದಲ್ಲಿ ಚಿಗರಿ, ಬಿಳಿಪಾರಿವಾಳ ಶಾಂತಿಯ ಸಂಕೇತವಾಗಿ ಬಿಂಬಿತಗೊಳ್ಳುತ್ತವೆ. ಹುಲಿಗಳೇ ಲೋಕದಲ್ಲಿ ತುಂಬಿಕೊಂಡಿರುವಾಗ ಜಿಂಕೆಗಳಿಗೆಲ್ಲಿಯ ಶಾಂತಿ ? ಎಂಬ ಪ್ರಶ್ನೆ ಈ ಕವಿಯನ್ನು ಕೊರೆಯುತ್ತದೆ –

---

೧. ಹೆಜ್ಜೆಗಳು : ಹೊತ್ತು ಮೂಡುವ ಸಮಯ : ಪುಟ-೨೪
೨. ಒಂದೇ ಕೊಡೆಯ ಕೆಳಗೆ : ಹೊತ್ತು ಮುಡುವ ಸಮಯ : ಪುಟ-೫

ಹಳ್ಳಿ ದಿಳ್ಳಿ ಕಂದಕ ಕ್ವಾಟಿ
ಹುಡುಕುತ ಹ್ವಾದರ ಹುಲಿಗೋಳ ಬೇಟಿ
ಯಾವ ಹುಲಿನಂತ ಕೇಳಲಿ ಕಟ್ಟಿ
ತಿಂದಿರೇನೋ ಚಿಗರಿs ಬೆನ್ನಟ್ಟಿ
ಯಾವ ಹುಲಿ ಅದನೆಲ್ಲಿ ಹಿಡಿಯಿತೊ
ಕೊಳ್ಳಿಗೆ ಪಂಜರ ಹಾಕಿ ಕೆಡವಿತೊ. ೩

–ಎಂಬ ಆತಂಕದಲ್ಲಿ ಕವಿ ಕಳೆದುಹೋದ ಶಾಂತಿ ಚಿಗರಿ ಹುಡುಕುವುದು. ಈ ಕವಿಯ ಸಾಂಸ್ಥಿಕ ಪ್ರಜ್ಞೆಯ ಶ್ರೇಯಸ್ಸಿರುವುದು 'ಶಾಂತಿಚಿಗರಿ' ಸತ್ತಿಲ್ಲವೆಂಬ ನಂಬಿಕೆಯಲ್ಲಿ. ದೇಶದ ಒಡಲು ತುಂಬ ಹೂತುಕೊಂಡ ಬಾಂಬುಗಳು ಸಿಡಿಯುತ್ತಿದ್ದರೂ ಆಕಾಶದೆತ್ತರ ಬೆಂಕಿ ಚಿಮ್ಮುತ್ತಿದ್ದರೂ ಶಾಂತಿ ಸತ್ತಿಲ್ಲವೆಂಬ ಅಚಲ ಭರವಸೆ. ಕಣ್ಣಿಗೆ ಕಾಣದಿದ್ದರೂ ಬೆದರಿ ಎಲ್ಲಿಯೋ ಅಡಗಿದೆ ಎಂಬ 'ಅಂತರಂಗದ ಆಶೆ.'

ತಿರಗಿ ತಿರಗಿ ನಮ್ಮ ಕಾಲ ಸ್ವಾತರೂ
ಹುಡುಕಿ ಹುಡುಕಿ ನಮ್ಮ ಕಣ್ಣ ಹ್ವಾದರೂ
ಅಂತರಂಗದ ಆಶೆ ಕೊನಿಗೆ
ಇಂದಿಲ್ಲ ನಾಳೆ ಬಂದಿsತ ಮನಿಗೆ. ೪

ಶಾಂತಿಯ ಪೋಷಣೆಯು ಸಾಮಾಜಿಕ ಸ್ವಾಸ್ಥ್ಯ. ಡಾ॥ ಇಟ್ಟಣ್ಣವರ ಸಾಂಸ್ಥಿಕ ಪ್ರಜ್ಞೆಯಲ್ಲಿ ವರ್ಗ–ವರ್ಣ–ಲಿಂಗ ಭೇದದ ಸಂಘರ್ಷವಿದೆ. ಸಾಮಾಜಿಕ ಸ್ಥಿತ್ಯಂತರಗಳ ಸಂಕರ್ಷಣವಿದೆ. ಆದರೆ ಸಾಮಾಜಿಕ ಸ್ವಾಸ್ಥ್ಯದ ಅಪಾರ ಕಾಳಜಿಯಿದೆ. ಅದು ಬಿಳಿ ಪಾರಿವಾಳದಲ್ಲಿ ಅಭಿವ್ಯಕ್ತಗೊಳ್ಳುತ್ತದೆ.

ಜಾಗತೀಕರಣ ನಮ್ಮ ಸಾಂಸ್ಕೃತಿಕ ಸಂಘರ್ಷಕ್ಕೆ ಕಾರಣ. ಊಳುವ ಭೂಮಿ ನಿವೇಶಗಳ ಲೆಕ್ಕದಲ್ಲಿ ಹೋಳೊಡೆದು ಬೋಳಾಗಿ ಹಾಳಾಗುತ್ತಿದೆ. ಒಂದೆಡೆ ಇಡೀ ಜಗತ್ತು ಒಂದು ಎಂಬ ಸಮಷ್ಟಿಯ ಉದಾತ್ತತೆ ಕೇಳಿ ಬರುತ್ತಿದ್ದರೆ ನಮ್ಮ ಓಣಿಯ ತುಂಬೆಲ್ಲ ಕಂಪೌಂಡುಗಳೇ ಕಾಣುತ್ತಿವೆ. ಸಾಮಾಜಿಕ ಬದಲಾವಣೆಗಳು ಸಾಂಸ್ಕೃತಿಕ ಸ್ಥಿತ್ಯಂತರಕ್ಕೂ ಕಾರಣವಾಗುತ್ತವೆ. ನಗರೀಕರಣದ ಭರಾಟೆಯಲ್ಲಿ ಹಳ್ಳಿಗರ ಮೇಲೆ ಜಿದ್ದಿನಿಂದ ಹಾರುವ ಹದ್ದುಗಳು ಇಟ್ಟಣ್ಣವರ ಕಾವ್ಯದಲ್ಲಿ ಎದ್ದು ಕಾಣುತ್ತವೆ. ಇವು ರೈತರ ಮಕ್ಕಳ ಕೈಯಲ್ಲಿಯ ರೊಟ್ಟಿ ಕಸಿಯುವ ಹದ್ದುಗಳು. ಈಗ ಇಲ್ಲಿ ಹದ್ದುಗಳದ್ದೇ ಹದ್ದು ಮೀರಿದ ಕಾರಭಾರು. ಯುಗಾದಿ ಬಂದರೂ ಕೋಗಿಲೆಗಳು ಕೂಗುವುದಿಲ್ಲ. ಅವುಗಳ ಅಸ್ತಿತ್ವವನ್ನೆ ಅಪಹರಿಸಿದ ನೋವು ಕವಿಯನ್ನು ಕಾಡುತ್ತದೆ.

ಕುಹೂ ಕುಹೂ ಅಂತ ಕೂಗು ಕೋಗಿಲಾ
ಎಲ್ಲಿ ಹ್ವಾದುವಪ್ಪಾ
ಹಾಡಿ ಆಡುದಕ ಆಡಿ ಹಾಡುದಕ

೩. ಶಾಂತಿ ಚಿಗರಿ : ಗಾಲಿ ಉಳ್ಳತ್ತಿ : ಪುಟ–೩೦
೪. ಅದೇ.

ಜಾಗಾ ಎಲ್ಲಿ ಪಾಪಾ
ಅಡವ್ಯಾನ ಗಿಡಗೋಳ ಮನಿ ಸೇರ್‍ಯಾವೋ
ತೋಲಿs ಕಂಬ ಆಗಿ
ಅಡವ್ಯಾಗ ಕೊಡಲಿ ಆಡ್ಯಾವ ಮತ್ತ
ಕಾಣದ್ಹಾಂಗ ಮಾಗಿ. [೫]

ಹೀಗಿದ್ದರೂ ರತ್ನಪಕ್ಷಿಯ ಮೂಲಕ ಈಗಲೂ ಯುಗಾದಿ ಬರುತ್ತದೆ ಎನ್ನುವುದೇ ಈ ಕವಿಯ ತೃಪ್ತಿ.

ಡಾ॥ ಶ್ರೀರಾಮ ಇಟ್ಟಣ್ಣವರ ಕಾವ್ಯದುದ್ದಕ್ಕೂ ಹೊಳೆಯಾಗಿ ಹರಿಯುವ ಪ್ರೇಮಸ್ಪಂದನ, ಸಾಂಸ್ಥಿಕ ಸಂಕರ್ಷಣ ಹಾಗೂ ಸಾಂಸ್ಕೃತಿಕ ಸಂಘರ್ಷಣಗಳನ್ನು ಬಿಡಿಬಿಡಿಯಾಗಿ ಇಲ್ಲಿ ಅವಲೋಕಿಸಲು ಪ್ರಯತ್ನಿಸಲಾಗಿದೆ.

## ೧. ಪ್ರೇಮ ಸ್ಪಂದನ :

ಇಟ್ಟಣ್ಣವರ ಕಾವ್ಯ ಪ್ರೀತಿಯ ಹೊಳೆ. ಪ್ರಣಯದ ಕೊಳಲು ಮಾನವ ಸಂಬಂಧಗಳ ಮಾವಿನ ತೊಳಲು. ಹೊಳೆ ಅದ್ಭುತಗಳ ಹರಿಯುವಿಕೆ. ಅಳೆಯಲಾಗದ ಹೊಳೆ ನೀರು, ನಿತ್ಯ ಬರುವ ಹೊಸ ನೀರು, ಹಸಿರುಗೊಳಿಸುವ ಹಸೆ ನೀರು, ದಾಹ ತಣಿಸುವ ತಿಳಿ ನೀರು, ಬದುಕು ಮನೆಯ ಹೊಸಲು ನೀರು : ಗತ್ತು–ವಹನ–ಜೀವನ–ಸೃಜನ_ಗೊತ್ತು–ದನಿಗಳೆಲ್ಲದರಲ್ಲೂ ಹೊಳೆ ಪ್ರೀತಿಗೆ ಸರಿಹೊಂದುವ ಸಾಮ್ಯತೆ. ತೆರೆತೆರೆಯಾಗಿ ನಮ್ಮೆದೆಯೊಳಗೆ ಇಳಿದು, ಅಲ್ಲಲ್ಲಿ ಸುಳಿಗೊಂಡು ಕಚಗುಳಿಯಿಡುತ್ತ ಬದುಕಿನ ಬುಗುರಿ ಗಿರ್ರನೇ ತಿರುಗಿಸುತ್ತದೆ.

ಡಾ॥ ಇಟ್ಟಣ್ಣವರ ಕಾವ್ಯ ಹಾಲುಗಲ್ಲದ ಹುಡುಗಿಯ ತುಟಿಗಳ ಮೇಲೆ ಬರೆದ ಪ್ರೇಮದ ಹಾಡು. ಅದಕ್ಕೆಂದೇ ಅವರು ಪ್ರೇಮದ ಹಾಡಿನ ಪ್ರೀತಿಯ ಕವಿ. ಅವರಿಗೆ ಪ್ರೀತಿಯೇ ನಂಬಿಕೆ ; ನಂಬಿಕೆಯೇ ಬದುಕು.

ಅಂಗೈಯೊಳಗಿನ ಪ್ರೀತಿ
ನಮ್ಮ ಕೈಯೊಳಗೈತಿ
ಅದಕ್ಕಿಂತ ಹೆಚ್ಚಿಂದ ಏನಿಲ್ಲಾ ! ಮತ್ತ
ಅದರಿಂದ ನಡದೈತಿ ಜಗಾಯೆಲ್ಲ. [೬]

ಪ್ರೀತಿಗಿಂತ ಪವಿತ್ರವಾದುದು ಜಗತ್ತಿನಲ್ಲಿ ಮತ್ತೊಂದಿಲ್ಲವೆಂಬುದು ಈ ಕವಿಯ ಹಾಡಿನ ಸೊಲ್ಲು. ಪ್ರೀತಿ ಹೃದಯದ ಹಂದರ, ಮನದ ಬೆಳಗಿನ ಚಂದಿರ. ಅದು ಕರುಳು ಕರುಳು ಸುತ್ತಿ ನಗೆ ಹೂವು ಅರಳಿಸುವ ಬೆಳದಿಂಗಳ ಬಳ್ಳಿ. ಕುಲ–ಗೋತ್ರ, ಆಸ್ತಿ–ಅಂತಸ್ತು, ಬಡತನ–ಸಿರಿತನಗಳನ್ನು ಮೆಟ್ಟಿ ಹಬ್ಬುವುದು. ಅದು ಭೇದವಿಲ್ಲದ ಭಾವ. ಅದಕ್ಕೆ ಬೇಧ ಬಿಸಿಲು: ಸಂದೇಹ ಬಿಸಿ ನೀರು.

೫. ಯುಗಾದಿ : ಗಾಲಿ ಉಳ್ಳತ್ಯೆತಿ : ಪುಟ–೨೫
೬. ಪ್ರೀತಿನ ಹೆಚ್ಚಿಂದ : ಹಾಡುಣ ಬಾರs ಪ್ರೇಮದ ಹಾಡಾ : ಪುಟ–೨೬

ಪ್ರೀತಿ ಹಂದರ ಮ್ಯಾಗ
ಹಬ್ಬುವ ಹೂಬಳ್ಳಿ
ಬಡತಾನ ಸಿರಿತಾನಲ್ಲಿ ನೋಡತೈತಿ । ಭೇದ
ಭಾವದ ಬಿಸಿಲಿಗೆ ಬಾಡತೈತಿ. [೭]

ವಿಶ್ವಾಸ ಪ್ರೀತಿ ವಲ್ಲರಿಯ ತಾಯಿಬೇರು. ಆ ಬಳ್ಳಿ ಪರಸ್ಪರ ನಂಬಿಗೆಯ ರಂಬೆಗೆ ಜೋಕಾಲಿ ಕಟ್ಟಿ ಪ್ರೇಮಿಗಳನ್ನು ಜೀಕಿಸುವುದು. ಸಂದೇಹದ ಕತ್ತರಿ ಕಂಡರೆ ಸಾಕು ತಾನೆ ತಾನಾಗಿ ತುಂಡಾಗಿ ಬೀಳುವುದು.

ಸಂಶೆ ಅಂಬುದು ಪ್ರೀತಿ ಎದಿಮ್ಯಾಗ
ಆಡಿದ್ಹಾಂಗ ಕತ್ತಿ
ಸಂಶೆದ ಜಳಕ ಪ್ರೀತಿಯ ಬಳ್ಳಿ
ಬಾಡತೈತಿ ಬತ್ತಿ. [೮]

ಈ ಕವಿಯ ಪ್ರೀತಿ 'ಹೊಳಿಸಾಲ ಬಳ್ಳಿ'; ಹಚ್ಚ ಹಸುರಿನ ಕಸುವು. ಕೇದಿಗೆಯ ಕಂಪು, ಬೆಳದಿಂಗಳ ಬೆಡಗು, ತಂಗಾಳಿ ಬೆರಗು. ತುಂಬಿಸೂಸುವ 'ಹಿರಿಹೊಳಿ'ಯ ಸಿರಿ, ಲಾವಣಿ ಲಾವಣ್ಯದ ತುತ್ತೂರಿ. ಅದರ ಬಳಕುವಿಕೆಯೇ ಪ್ರೇಮ ಮೀಮಾಂಸೆ.

ಪ್ರೀತಿ ಸೌರಮಂಡಲದ ಸೂತ್ರ. ಅದರಿಂದಲೇ ಹಗಲು-ರಾತ್ರಿ ಅದಿಲ್ಲದಿರೆ ಬ್ರಹ್ಮಾಂಡವೇ ಶೂನ್ಯ.

ಪ್ರೀತಿಯಿಂದನಽ ಹಗಲಿರಾತ್ರಿ ಈ
ಜಗ ತಿರಗತೈತಿ
ಪ್ರೀತಿ ತಗದಿಟ್ಟ ತಿಳಿದ ನೋಡಿರಿ
ಏನ ಉಳಿತೈತಿ. [೯]

ಬದುಕಿನಲ್ಲಿ ನೋವು-ನಲಿವು ಪ್ರೀತಿಯ ಎರಡು ಮಗ್ಗಲುಗಳು. ಮನದನ್ನೆಯನ್ನು ನೋಡಿದರೆ ಖುಷಿ : ಕಾಣದಿರೆ ಕಸಿವಿಸಿ. ಖುಷಿ-ಕಸಿವಿಸಿಗಳೆರಡಕ್ಕೂ ಪ್ರೀತಿಯೇ ಸ್ಥಾಯಿ.

ದಿನದ ಬಾಳೆದಾಗ ದುಕ್ಕ ದುಮ್ಮಾನ
ಬೀಸಿ ಹೊಡಿತಾವ
ಆದರೂನೂ ಪ್ರೀತಿ ಐತಿ ಅಂತನಽ
ಜೀವ ಹಿಡಿಽತೇನ. [೧೦]

---

೭. ಸಿರಿತಾನ ಹಿರಿದಂತ ತಿಳಿಕೊಂಡಿ : ಹಾಡುಣ ಬಾರಽ ಪ್ರೇಮದ ಹಾಡಾ : ಪುಟ-೨೮
೮. ಮಾತಾಡೊಲ್ಲಿ ಯಾಕೆ : ಹಾಡುಣ ಬಾರಽ ಪ್ರೇಮದ ಹಾಡಾ : ಪುಟ-೨೪
೯. ಪ್ರೀತಿ : ಗಾಲಿ ಉಳ್ಳತೈತಿ : ಪುಟ-೧೯
೧೦. ಪ್ರೀತಿ : ಗಾಲಿ ಉಳ್ಳತೈತಿ : ಪುಟ-೧೮

ಪ್ರಪಂಚದಲ್ಲಿ ತೂಗಲಾಗದ ವಸ್ತು ಒಂದೇ – ಅದುವೇ ಪ್ರೀತಿ.

ಗುಡ್ಡ ಗಂವಾರ ನೀರಿನಿಂದ ಭಾರ
ಅನಸತೈತಿ ಲೋಕಾ
ಪ್ರೀತಿ ತಗದರ ತೂಗುದಿಲ್ಲ ಇದ
ಒಂದ ಗುಂಜಿ ತೂಕಾ. ೧೧

ಪರ್ವತ, ಸಮುದ್ರಗಳು ಪ್ರೀತಿಯ ಮುಂದೆ ಕೇವಲ ಗುಂಜಿ ತೂಕದವು. ಜಗದಲ್ಲಿ ಅದರಂತಹ ವಸ್ತು ಮತ್ತೊಂದಿಲ್ಲ. ಮಧುರಚೆನ್ನರ ಮಾತಿನಲ್ಲಿಯೇ ಹೇಳುವುದಾದರೆ "ಅದು ಮನಗಂಡ ಮಾತು". ಕವಿ ಸೋಮಶೇಖರ ಇಮ್ರಾಪೂರ ತಮ್ಮ ಕಾವ್ಯದಲ್ಲಿ ಪ್ರೀತಿಯ ಚಿರಂತನತೆಯನ್ನು ಶೋಧಿಸುವುದು ರೋಚಕವಾಗಿದೆ.

ಪ್ರೀತಿsನ ಹರಿದು ಹರಿಪಲ್ಲೆ ಮಾಡಿ
ಗಾಳ್ಯಾಗ ತೂರಲೇನ ?
ಗಾಳಿಯ ಹಿಡಿದ ಗಡಿಗ್ಯಾಗ ತುಂಬಿ
ಕಲ್ಲಿಗೆ ಹೇರಲೇನ ? ೧೨

ಪ್ರೀತಿ ಹರಿಯುವುದಿಲ್ಲ. ಹಾರುವುದಿಲ್ಲ. ಸುಡುವುದಿಲ್ಲ. ನೆನೆಯುವುದಿಲ್ಲ, ಸಾಯುವುದಿಲ್ಲ. ಅದು ಚಿರಂತನವಾದುದು, "ಸಖಿಗೀತ"ದಲ್ಲಿ ಬೇಂದ್ರೆ ಅದರ ಮಹತ್ತು ಬೆಳಗುತ್ತಾರೆ.

ಅನ್ನಕ್ಕೆ ಬಾಳಾಗಿ ಕಾವ್ಯಕ್ಕೆ ಹೋಳಾಗಿ
ಮಾನಕೆ ಆಳಾಗಿ ಉಸಿರೆಳೆದುದು
ಬಾಳಲ್ಲ ಬದುಕಲ್ಲ : ಜೀವ ಜೀವಕೆ ಉ–
ದ್ದೀಪನವಾದುದೆ ಜೀವನವು

ಅದು ಇದೆ ಎದೆಯಲ್ಲಿ ಬೆಳಕಿನ ಬದಿಯಲ್ಲಿ
ರಸಗಂಗಾ ನದಿಯಲಿ ಅದರುಗಮ
ಹೆಸರದಕೆ ಪ್ರೀತಿಯು. ಹಿಗ್ಗಿನ–ರೀತಿಯು
ಆತ್ಮದ ನೀತಿಯು ಮಧುಸಂಗಮ. ೧೩

ಪ್ರೀತಿಗೆ ಹಲವು ಒಲವು ; ಹಲವು ಗೆಲವು. ಅವೆಲ್ಲವನ್ನು ಎಣಿಸಿ ಹೇಳುವುದು ಕಷ್ಟಸಾಧ್ಯ. ಅದು ಹರಿವ ನದಿಯಂತೆ, ಬೀಸುವ ಗಾಳಿಯಂತೆ, ಉರಿವ ಬೆಂಕಿಯಂತೆ. ಪಭುಗಳು ಹೇಳುವಂತೆ–

---

೧೧. ಅದೇ :
೧೨. ಪ್ರೀತಿ : ಬೇವು–ಬೆಲ್ಲ : ಪುಟ–೧೭
೧೩. ಸಖಿಗೀತ : ಪುಟ–೩೮

ಹರಿವ ನದಿಗೆ ಮೈಯೆಲ್ಲ ಕಾಲು
ಬೀಸುವ ಗಾಳಿಗೆ ಮೈಯೆಲ್ಲ ಕೈ
ಉರಿವ ಬೆಂಕಿಗೆ ಮೈಯೆಲ್ಲ ನಾಲಿಗೆ

ಅಲ್ಲಮನ ಈ ವಚನ ಮಾತ್ರ ಪ್ರೀತಿಯನ್ನು ಮೂರ್ತೀಕರಿಸಬಹುದು ಎನಿಸುತ್ತದೆ.

ಹೆಣ್ಣು–ಗಂಡಿನ ಪ್ರೇಮ ಪ್ರೀತಿಯ ಘಟ್ಟ. ಈ ಘಟ್ಟದಲ್ಲಿಯೂ ಹಲವು ಆಯಾಮಗಳು– ವಿವಾಹಪೂರ್ವ ಪ್ರೇಮ ಬೇರೆ : ದಾಂಪತ್ಯ ಪ್ರೀತಿ ಬೇರೆ. ಸ್ನೇಹ ಸೌರಭ ಬೇರೆ ; ಸಂಸಾರ ಸಮನ್ವಯ ಬೇರೆ. ಇದರಲ್ಲೂ ವೈಯಕ್ತಿಕ–ಸಾಂಸ್ಥಿಕ–ಸಾಂಸ್ಕೃತಿಕವೆಂದು ಮತ್ತೆ ವರ್ಗೀಕರಿಸಬಹುದು. ಇದು ಆಕಾಶದಲ್ಲಿಯ ಚುಕ್ಕೆಗಳನ್ನು ಎಣಿಸುವ ಲೆಕ್ಕ. ನಿರಾಕಾರದ ಪ್ರೀತಿ ಒಬ್ಬ ವ್ಯಕ್ತಿಗೆ ಮಡದಿ–ಮಗಳು, ಅಕ್ಕ–ತಂಗಿ, ಅಣ್ಣ–ತಮ್ಮ, ಗೆಳೆಯ–ಗೆಳತಿ, ಒಡೆಯ–ಒಡತಿ.......... ಹೀಗೆ ಹಲವು ರೂಪಗಳಲ್ಲಿ ಸುತ್ತಿಕೊಳ್ಳುತ್ತದೆ. ಇನ್ನೂ ವಿಚಿತ್ರವೆಂದರೆ ಒಬ್ಬರ ಮಗಳು ಮತ್ತೊಬ್ಬರಿಗೆ ಪತ್ನಿ, ಒಬ್ಬರ ಪತ್ನಿ ಇನ್ನೊಬ್ಬರಿಗೆ ತಾಯಿ. ಅದನ್ನು ಅಖಂಡವಾಗಿಯೇ ದರ್ಶಿಸಬೇಕು. ಇಟ್ಟಣ್ಣವರ 'ಗಾಲಿ ಉಳ್ಳತೈತಿ' ಸಂಕಲನದ ಪ್ರೀತಿ ಕವಿತೆ ಇದನ್ನು ಚನ್ನಾಗಿ ವಿವರಿಸುತ್ತದೆ.

ಮಗಳ ಕಳಸತ ಹಡದ ತಂದಿ
ಕಣ್ಣೀರ ಸುರಸುದ್ಯಾಕ
ಕಳ್ಳ ಕೋದ ಕೊಟ್ಟಾಂಗ ಆಗತತಿ
ದುಕ್ಕ ಒತ್ತಿ ಮನಕ. [೧೪]

ಇದು ತಂದೆಯ ಪ್ರೀತಿಯಾದರೆ ಅಣ್ಣ–ತಂಗಿಯ ಪ್ರೀತಿ ಹಬ್ಬದ ಸೀರೆಯಲ್ಲಿ ಸೂರೆಗೊಳ್ಳುವುದು.

ಕೊಟ್ಟ ಹೆಣ್ಣ ಕುಲಕ್ಹೊರಗ ಆದರೂ
ಅಣ್ಣತಂಗಿ ನೆನಸಿ
ಹಬ್ಬ ಹರಿದಿನಕ ಸೀರಿ ಉಡಸತಾನ
ಹೆಣ್ಣ ಮಗಳ ಕರಿಸಿ. [೧೫]

ಹೊಸ್ತಿಲ ಅಕ್ಕಿ ತುಳಿದು, ನಗೆ ಸೂಸಿ ಬಂದ ಸೊಸೆಯು ಅತ್ತೆ ಮಾವನನ್ನು ಪ್ರೀತಿಯಲ್ಲಿ ಬಂಧಿಸಿದರೆ ಗಂಡನ ಜೀವದಲ್ಲಿ ಜೀವ ಮಡಗುವ ಮಡದಿ ಮನೆಗೆ ದೀಪವಾಗುತ್ತಾಳೆ.

ಅವ್ವ ಅನನ್ಯ ಪ್ರೀತಿಯ ಬಂಗಾರದ ಗಣಿ. ಅವಳ ಪ್ರೀತಿ ಕಡಲಿಗಿಂತಲೂ ಆಳ ; ಹಿಮಾಲಯಕ್ಕೂ ಎತ್ತರ.

ಪ್ರೀತಿ ಖನಿ ಎದಿಯಾಗ ತೋಡಿಕೊಂಡ
ಐತಿ ಒಂದ ಜೀವ
ಅಪ್ಪರೊಳಗ ಬಾಳ್ಗೆಟ್ಟನಾಕಿ ಅಕಿ

---

೧೪. ಪ್ರೀತಿ : ಗಾಲಿ ಉಳ್ಳತೈತಿ : ಪುಟ–೧೮
೧೫. ಅದೇ.

ನಮ್ಮ ನಿಮ್ಮ ಅವ್ವಾ
ಕೂಳ ಕಣ್ಣೀರ ಕೊಡೆ ತಿಂದ ಮಾಡ್ತಾಳ
ಜ್ವಾಕಿ ಜತನಾ
ಹೊಲಸ ಬಳಿತಾಳ ಹಾಲ ಕುಡಸತಾಳ
ಹಿಡದ ಕಳ್ಳ ಕೂಸಾ. [೧೬]

ಕಳ್ಳ ಬಳ್ಳಿಯ ಸಂಬಂಧ ಮೀರಿನಿಂತದ್ದು ಸ್ನೇಹ ಬಂಧ. ರಕ್ತದಾಚೆಯ ಅನುರಕ್ತ ಸಂಬಂಧವದು. ಸ್ನೇಹವು ಶಿಷ್ಟಾಚಾರದ ಬಲೆ ಹರಿದು ವಿಜೃಂಬಿಸುವ ಪ್ರೀತಿ.
ಅವ್ವ ಪ್ರೀತಿಯ ಕಡಲು : ಸ್ನೇಹ ಆಗಸದ ಒಡಲು.

ಬಳ್ಳಿ ಬಂಗಾರದ ಆಸೆ ಹರದ ಕುಲನೆಲಿ
ಬಿಟ್ಟಕೊಟ್ಟ
ಜೀವ ಕೊಡತಾವ ಹ್ಯಾಂಗೋ ಏನೋ
ಇದ ಏನ ಕಣ್ಣಕಟ್ಟ. [೧೭]

ಸ್ನೇಹ ಪ್ರೀತಿಯ ಮಹಾಮಾಯೆ. ಅದೊಂದು ಅದ್ಭುತ ಮೋಡಿ. ಇವು ಹೊಳಿಸಾಲ ಬಳ್ಳಿಯ ಕೆಲವು ಹೂವುಗಳು. ಈ ಹೂವುಗಳನ್ನು ಹೀಗೆ ದಂಡೆ ಕಟ್ಟಬಹುದು.

೧. ಪ್ರೇಮದ ಹಾಡುಗಳು
೨. ದಾಂಪತ್ಯ ಗೀತೆಗಳು
೩. ಕೌಟುಂಬಿಕ (ವಾತ್ಸಲ್ಯ) ಗೀತೆಗಳು
೪. ಸಖ್ಯ ಗೀತೆಗಳು
೫. ಶಿಶು ಗೀತೆಗಳು
೬. ನಿಸರ್ಗ ಕವಿತೆಗಳು

## ೨.೧. ಪ್ರೇಮದ ಹಾಡುಗಳು

ಕಾಮ-ಪ್ರೇಮಗಳನ್ನು ಬೇರ್ಪಡಿಸುವುದು ಸುಲಭವಲ್ಲ. ಕಾಮ ಪ್ರೇಮದ ಬಿತ್ತು. ಆ ಸೆಳೆತವೇ ಪ್ರೇಮವಾಗಿ ಪರಿವರ್ತಿತಗೊಳ್ಳುವುದು. ಭಾರತೀಯ ಪರಂಪರೆಯಲ್ಲಿ ಕಾಮವನ್ನು ನಿಕೃಷ್ಟವಾಗಿ ಕಾಣಲಾಗುತ್ತದೆ. ನಮಗೆ ಕಾಮ ದಹನದ ಸಂಕಲ್ಪ. ಆದರೆ ಕಾಮನನ್ನು ಹತ್ತಿಕ್ಕಲಾಗದ ತಳಮಳ. ಅದನ್ನು ತಣಿಸುವ ನೂರೆಂಟು ಸಾಹಸಗಳು. ಇವೆಲ್ಲವೂ ಹದಿಹರೆಯದಲ್ಲಿ ಸಾಮಾನ್ಯ. ಹರೆಯದ ಮನಸ್ಸುಗಳಾಳದ ಪ್ರಣಯ ಭಾವೋತ್ಕಟತೆ ಇಟ್ಟಣ್ಣವರ ಕಾವ್ಯದಲ್ಲಿ ಶೃಂಗಾರ ರಸೋದ್ಯಾನ ನಿರ್ಮಿಸಿದೆ. ಗರದಿ ಗಮ್ಮತ್ತಿನಲ್ಲಿ ಸೆಲೆಯೊಡೆದ ಶೃಂಗಾರ ಹೊಳಿಸಾಲ ಬಳ್ಳಿಯಂತೆ ಕಾವ್ಯದುದ್ದಕ್ಕೂ ಹಬ್ಬಿದೆ.

---

೧೬. ಅದೇ. ಪುಟ-೧೯
೧೭. ಅದೇ.

ಪ್ರೇಮದ ಹಾಡುಗಳ ವಸ್ತು ವಿವಾಹಪೂರ್ವದ ಪ್ರಣಯ. ಅದು ಬದುಕಿನ ರಮ್ಯ(Romentic) ಘಟ್ಟ. ಹದಿಹರೆಯದ ಗಂಡು-ಹೆಣ್ಣು ಪರಸ್ಪರ ಆಕರ್ಷಿತರಾಗುವುದು ಪ್ರಕೃತಿ ಧರ್ಮ. ಕಾಮವು ಸ್ನೇಹವಾಗಿ, ಸ್ನೇಹವು ಪ್ರೀತಿಯಾಗಿ, ಪ್ರೀತಿ ಬಂಧವಾಗಿ, ಬಂಧ ಅನುರಾಗವಾಗುವುದು ಬದುಕು. ಇದುವೇ ನಿಸರ್ಗ. ಡಾ॥ ಇಟ್ಟಣ್ಣವರ ಕಾವ್ಯ ನಿಸರ್ಗ ಸೆಳೆತದ ತೀವ್ರತೆ, ಭಾವದ ಒತ್ತಡ, ಪ್ರೇಮಿಗಳ ಮನಸುಗಳ ಕನಸು, ತುಡಿತ, ಸಾಹಸ-ಸಂಘರ್ಷ, ಸರಸ-ಸಲ್ಲಾಪ, ವಿಹಾರ-ವಿರಹಗಳನ್ನು ಕಲಾಪೂರ್ಣವಾಗಿ ಹೊಸೆಯುತ್ತದೆ. ಮಡಿ-ಮೈಲಿಗಳನ್ನು ಕೊಡವಿ ಪ್ರಣಯಕ್ಕೆ ಮಣೆ ಹಾಕಿದೆ- ಇದೇ ಕಾರಣದಿಂದಾಗಿ ಡಾ॥ ಇಟ್ಟಣ್ಣವರ ಗಮನ ಸೆಳೆಯುತ್ತಾರೆ. ಭಾರತೀಯ ಸಮಾಜದಲ್ಲಿ ವಿವಾಹಪೂರ್ವ ಹಾಗೂ ವಿವಾಹೇತರ ಪ್ರಣಯ ಅನೈತಿಕವೆನಿಸುತ್ತದೆ. ದಾಂಪತ್ಯದ ಚೌಕಟ್ಟಿನಲ್ಲಿಯ ಪ್ರೀತಿಯೇ ಅವರಿಗೆ ಪ್ರೇಮ; ಅದನ್ನು ದಾಟಿದ ಪ್ರಣಯ ಕಾಮ. ದಾಂಪತ್ಯದ ಚೌಕಟ್ಟು ಮೀರಿದ ಪ್ರೇಮ ಅಪರಾಧವೆಂಬ ಭಾವನೆ. ಕಾನೂನಿನ ದೃಷ್ಟಿಯಲ್ಲಿಯೂ ಅದಕ್ಕೆ ಮಾನ್ಯತೆಯಿಲ್ಲ. ನಿಸರ್ಗ ಸಹಜ ಪ್ರೇಮವನ್ನು ತಿರಸ್ಕರಿಸುವ ಸಂದರ್ಭದಲ್ಲಿ ಅದನ್ನೆ ತಮ್ಮ ಕವಿತೆಗಳಿಗೆ ವಸ್ತುವಾಗಿಸಿದ ಶ್ರೀರಾಮರ ಧೈರ್ಯ ಮೆಚ್ಚಬೇಕು.

ವಿವಾಹಪೂರ್ವ ಪ್ರಣಯ ಅಪರಾಧವಲ್ಲದಿದ್ದರೂ ಅದಕ್ಕೆ ಸಾಮಾಜಿಕ ಮಾನ್ಯತೆಯಿಲ್ಲ. ಅದು ಬಿಡಿಸಲಾಗದ ಗೋಜಲು. ಜಾತಿ, ಅಂತಸ್ತು, ಸಂಪತ್ತು, ಅಧಿಕಾರಿಗಳ ಗೋಡೆ ದಾಟುವುದು ಕಠಿಣ ಸವಾಲು. ಅದು ಗೊತ್ತಿದ್ದರೂ ಪ್ರೀತಿಸುವ ಮನಸ್ಸುಗಳು ಸುಮ್ಮನಿರಲು ಆಗುವುದಿಲ್ಲ.

**ನಮ್ಮ ಪ್ರೀತಿ ಬೆಳೆಬೆಳೆದ ಬಂತ**
**ಹೊಳಿಸಾಲ ಬಳ್ಳಿ ಹಾಂಗ**
**ನಂದೂ ನಿಂದೂ ಪ್ರೀತಿ ಐತಿ ಖರೆ**
**ಕೂಡು ಬಗಿ ಹ್ಯಾಂಗ ?** ೧೮

ಪ್ರೇಮಿಗಳಿಗೆ ಮಿಲನದ ಸಮಸ್ಯೆ. ಮನಸ್ಸಿನ ದಾರಿಯಲ್ಲಿ ಅಡ್ಡಗೋಡೆಗಳೇ ಜಾಸ್ತಿ. ಹಿರಿಯರಿಗೆ ಹುಡುಗರ ಮನಸ್ಸುಗಳು ಅರ್ಥವಾಗುವುದಿಲ್ಲ. ಅವರು ಸಂಪ್ರದಾಯ ಪ್ರೀಯರು. 'ಮುದಕರಿಗೆಲ್ಲ ಮೂರದ್ದೇಲಿ । ಪ್ರೀತಿ ಕಿಮ್ಮತ್ತು.'

ಗ್ರಾಮೀಣ ಬದುಕಿನಲ್ಲಿ ಪ್ರೀತಿ ಎಂದರೆ ಅಸಡ್ಡೆ. ಪ್ರೀತಿಸಿ ವಿವಾಹವಾಗುವ ಪರಿಕಲ್ಪನೆ ಇನ್ನು ನಮ್ಮ ಹಳ್ಳಿಗಳ ಸೀಮೆ ದಾಟಿ ಬಂದಿಲ್ಲ. ಪಟ್ಟಣಗಳಲ್ಲಿ ಪ್ರೇಮವಿವಾಹಗಳು ಅಪರೂಪಕ್ಕೆ ಸಂಭವಿಸಬಹುದು. ಆದರೆ ಹಳ್ಳಿಯಲ್ಲಿ ಅದೊಂದು ಅದ್ಭುತ. ಹುಡುಗ ಹುಡುಗಿಯನ್ನು ಪ್ರೀತಿಸುತ್ತಿರುತ್ತಾನೆ. ಹುಡುಗಿ ಹುಡುಗನನ್ನು ಕದ್ದು ಕದ್ದು ನೋಡುತ್ತ ಮನಸ್ಸಿನಲ್ಲಿಯೇ ಮಂಡಗೆ ತಿನ್ನುತ್ತಿರುತ್ತಾಳೆ.

**ಏರ ಹರೇದಾಂವ ಗೆಳತಿಯ ಅಣ್ಣ**
**ಒಳ್ಳೇ ರೂಪವಂತ**
**ಹಾಲ ಮ್ಯಾಲಿನ ಕೆನಿಹಾಂಗ ನಮ್**
**ಪ್ರೀತಿ ಕೊಡಿಬಂತ.** ೧೯

---

೧೮. ಗರದಿಗಮ್ಮತ : ಹೊಳಿಸಾಲ ಬಳ್ಳಿ : ಪುಟ-೧

೧೯. ಮನಿಯಾಗ ಹೇಳಲ್ಯಾಂಗ : ಹೊಳಿಸಾಲ ಬಳ್ಳಿ : ಪುಟ-೩

ಪ್ರೀತಿ ಹಾಲ ಮೇಲಿನ ಕೆನೆ, ಅನುಪಮ ಉಪಮೆ. ಪ್ರೀತಿಯ ಸಹಜತೆ, ಸಂಕೀರ್ಣತೆ, ತೀವ್ರತೆ, ಅನಿವಾರ್ಯತೆ ಹಾಗೂ ಪರಿಪೂರ್ಣತೆಯನ್ನು ಬೇರೆ ಉಪಮೆ ಮೂಲಕ ಉಪಮಿಸುವುದು ಸಾಧ್ಯವೇ ಇಲ್ಲ. ಅದು ಭಾವದ ಮೇಲೆ ಕನಸುಗಟ್ಟುವ ಕೆನೆ. ನಮ್ಮಲ್ಲಿ ಪ್ರೀತಿ ಕೂಡಿ ಬಂದರೆ ಸಾಲದು, ಕಂಕಣಬಲ ಕೂಡಿ ಬರಬೇಕು. ನೆಪ ಹುಡುಕಿಕೊಂಡು ಹುಡುಗಿ ಮೆಚ್ಚಿದ ಹುಡುಗನನ್ನು ಕೂಡಲು ಪ್ರಯತ್ನಿಸುವ ಚಿತ್ರಗಳು ಮನಮೋಹಕ.

ನೀರ ನೆವಾ ಮಾಡಿ ಕೆರಿ ದಾರ್‍ಯಾಗ
ಅವನ ಕೂಡತಽನ
ಹಿರಿಯಾರನ್ನವರ ನೆದರ ತಪ್ಪಿಸಿ
ಮಾರಿ ನೋಡತಽನ. ೨೦

ಅವಳ ಗುಪ್ತ ಪ್ರೀತಿ ಗೆಳೆತಿಯರಿಗೆ ತಿಳಿದಿದೆ. ಅವರು ಎಚ್ಚರಿಸಿಯೂ ಆಗಿದೆ. ಆದರೆ ಪ್ರೀತಿಯ ಗುಟ್ಟು ಬಿಡಿಸಿ, ಅದನ್ನು ಅಧೀಕೃತಗೊಳಿಸಲು ಅಂಜಿಕೆ. ಕಣ್ಣು ಮುಚ್ಚಿ ಹಾಲು ಕುಡಿಯುವ ಬೆಕ್ಕು ಒಂದು ದಿನ ಒದೆ ತಿನ್ನುವುದು ಖಂಡಿತವೆಂದೂ ತಿಳಿದಿದೆ.

ಹುಡುಗನ ಸ್ಥಿತಿಯೂ ಇದೇ, ಸಮಸ್ಯೆಗಳ ಸರಮಾಲೆ.

ಹಳಿ ಕಾಲದಾಗ ಕುಂತಾಳ ತಾಯಿ
ಜಾತಿ ಭೂತ ಬಡದ
ಸುದ್ದಿ ಕೇಳಿದರಽ ಸತ್ತ ಹೋಗತಾಳ
ಒಮ್ಮಿಗೆ ಎದಿ ಒಡದ. ೨೧

ಅಪ್ಪ ವಿಚಾರವಾದಿಯಲ್ಲ. ಅಣ್ಣನಿಗೆ ಸ್ವಂತಿಕೆಯಿಲ್ಲ. ಅತ್ತಿಗೆಗೆ ಐದು ಹೆಣ್ಣು. ಅವಳಿಗೆ ಅವುಗಳ ಮದುವೆ ಚಿಂತೆ. ತನ್ನ ಪ್ರೀತಿಯ ವಿಷಯ ಯಾರ ಮುಂದೆ ಹೇಳಬೇಕೆನ್ನುವದು ತಿಳಿಯದು. ಕೊನೆಗೆ ಪ್ರೀತಿಯ ತಂಗಿಗೆ ಹೇಳಿದರೆ 'ಅಳಕೊಂತ ಕುಂತ ಹೇಳ್ಯಾಳ ಬ್ಯಾರೆ । ತನ್ನ ಕತಿ ಒಂದ.'

ಗೌಡರ ಬಸವನ ಪ್ರೀತಿ ಮಾಡಿಽನ
ಹ್ಯಾಂಗ ನನ್ನ ಪಾಡ
ಕೈಯ ಮುಗಿತಽನ ಕಾಲ ಹಿಡಿತಽನ
ಹ್ಯಾಂಗರ ನೀಽ ಮಾಡ. ೨೨

ಹೆಣ್ಣು ಗಂಡುಗಳಿಬ್ಬರದೂ ಇದೇ ಸಮಸ್ಯೆ. ಊರೊಳಗೆ, ಮನೆಯೊಳಗೆ ಕಲ್ಲು ಮನಸ್ಸಿನ ಮಂದಿ. ಊರು ಕೇರಿಯೊಳಗೆಲ್ಲ ಸಂದೇಹವೇ ಸಂಧಿ. ಕಾಡಿಗೆ ಹೋಗಿ, ಹೂವಿನ ಹಸೆ ಹಾಕಿ ತಂಗಾಳಿಗೆ ಮೈ ಚಾಚಿ ಪ್ರೀತಿಯ ಕಾವು ಚಾಚಿ –

---

೨೦. ಅದೇ.

೨೧. ಹೇಳಿದರಂಜಿಕೆ : ಹಾಡುಣು ಬಾರಽ ಪ್ರೇಮದ ಹಾಡಾ : ಪುಟ–೫

೨೨. ಅದೇ. ಪುಟ–೬

ಸುತ್ತಮುತ್ತ ಮರತ

ಬನದಾಗ ತಿಗರ್ಯಾಗಿ, ತುಟಿಗೆ ತುಟಿ ಸೇರಿಸಿ, ಮಲಗುವ ಹವಣಿಕೆ. ಪರಸ್ಪರರನ್ನು ರೆಪ್ಪೆಯೊಳಗೆ ಮುಚ್ಚಿಕೊಂಡು ಹಾಯಾಗಿ ಮೇಲೆ ಹಾರುವ ಚಟಪಡಿಕೆ.

ಮೆಚ್ಚಿದ ಹುಡುಗ ಮರೆಯಾದಾಗ ಹುಡುಗಿಗೆ ಎಂಥದೋ ಸಂಕಟ. ಮನಸ್ಸಿಗೆ ಸೊಗಸಿಲ್ಲ. ಮಾವಿನ ನೆರಳು ಬಿಸಲಾಗುತ್ತದೆ. ಕೊರಳಸರ ಮುತ್ತು ಬಾಡುತ್ತವೆ.

ನನ ನಿದ್ದಿ ನೀರಡಕಿ
ತನsಗೂಡ ಓದಾನ
ತನುವೆಲ್ಲ ಬಳಬಳ ನರಸೋತ
ದಿನಕ್ಕೊಮ್ಮೆ ನನ್ನವನ
ಮೋತಿ ನೋಡು ನೇಮು
ಬರತಾನೆಂದಿಗೆ ತಾಯಿ ರಗಡಾತ. [೨೩]

ಭೆಟ್ಟಿಯಾಗದಿದ್ದರೆ ನೋವು; ಭೆಟ್ಟಿಯಾದರೂ ಮಿಲನದ ಸುಖಕ್ಷಣದಲ್ಲಿಯೇ ಕರಗಿ ಹೋಗುವ ಭಯ ನೋವು, ಪ್ರೇಮಿಗಳ ಕಷ್ಟವೇ ಅಂಥದ್ದು.

ಕುಂತರ ನಿಂತರ ಬರೆ ನೆನಪಾ
ಎದಿ ಬಯಲಾಗ ಕುಣಿಯುವ ರೂಪಾ
ಕಂಡರ ನಾ ನಿನ ಹ್ಯಾಂಗಾ ಹೇಳಲಾ
ಹೆಜ್ಜಿ ಕೀಳದ ತುಳದ್ಹಾಂಗ ಮಳಲಾ
ಉಟ್ಟ ಬಂದರ ಹಳದಿ ಪತ್ತಲಾ
ಬವಳಿ ಬಂದ ನನ್ನ ಕಣ್ಣ ಕತ್ತಲಾ
ಅಡರಾಸಿ ಗ್ವಾಡಿ ಹಿಡದ ನಿಂತರ
ಗ್ವಾಡಿಯ ತುಂಬ ನಿನ್ನ ಚಿತ್ತರ. [೨೪]

– ಎಂದು ಹುಡುಗಿಗೆ ಹುಡುಗ ಹೇಳಿದರೆ, ಹುಡುಗಿ ಹುಡುಗನಿಗೆ –

ಹುಡುಗಾ ಹೇಳಲೇನೋ ನಿನ್ನ
ಯಾಕ ಬಯಸತೇನೋ
ಮೋಡಿ ಮಾಡಿದಿ ನನ ಮ್ಯಾಲ ಜಾಣಾ
ನಿನ್ನದ ನೆನಪ ಹಗಲ ಸಂಚಾನಾ
ಹರೆs ಹೇಳುವ ಸಣ್ಣಾನ ಮೀಸಿ

---

೨೧. ಹೇಳಿದರಂಜಿಕೆ : ಹಾಡುಣು ಬಾರs ಪ್ರೇಮದ ಹಾಡಾ : ಪುಟ-೫

೨೨. ಅದೇ. ಪುಟ-೬

೨೩. ಏಟೇಟು ಸೊಗಸಿಲ್ಲ : ಹಾಡುಣು ಬಾರs ಪ್ರೇಮದ ಹಾಡಾ : ಪುಟ-೪೦

೨೪. ಹುಡಗಿ ಹೇಳಲೇನ : ಹಾಡುಣು ಬಾರs ಪ್ರೇಮದ ಹಾಡಾ : ಪುಟ-೪೬

ಎದರಿಗೆ ನಿಂತರ ಜುಮು ಜುಮು ಎನಿಸಿ
ನಡಗಿ ನೋಡಿದರ ಅತಿ ಗಂಭೀರಾ
ಗುಡಿ ಬಯಲಾಗ ಹರದ್ಹಾಂಗ ತೇರಾ. [೨೫]

ಇಬ್ಬರದೂ ಬೆಳ್ಳಕ್ಕಿಯಂಥ ಬೆಳ್ಳನೇ ಮನಸ್ಸು. ಇಟ್ಟಣ್ಣವರ ಕಾವ್ಯದ ನಲ್ಲ–ನಲ್ಲೆಯರು ಕಾಮಿಗಳಲ್ಲ, ಪ್ರೇಮಿಗಳು. ಅವರಲ್ಲಿ ಕಾಮದ ಕಾವಿಲ್ಲ ; ಪ್ರೇಮದ ಪರಿಮಳವಿದೆ. ಅವರು ಅಲ್ಲದ ಆಶೆಗೆ ಜೊಲ್ಲು ಸುರಿಸುವವರಲ್ಲ ಮೈ ಕಾವಿಗೆ ಮರ ಸುತ್ತುವವರಲ್ಲ. ಅವರ ಕಣ್ಣುಗಳಲ್ಲಿ ಕಲ್ಮಶವಿಲ್ಲ. ಮನಸ್ಸಿನಲ್ಲಿ ಬೆಂಕಿಯಿಲ್ಲ. ಅವರಿಗೆ ನೈತಿಕತೆಯೇ ಲಕ್ಷ್ಮಣ ರೇಖೆ.

**ಹೊಲಾ ಕಾಯುವ ಹುಡುಗಿಗೆ ಅವಳ ತಂದೆ ಹೇಳುವ ಮಾತು ಗಮನಿಸುವಂಥದ್ದು.**

**ಹುಡಿಗಿ ತಂದಿಗೆ ತುಡಗ ಸಿಕ್ಕ ಮ್ಯಾಗ**
**ಹುಡಿಗಿ ತಂದಿಗೆ ತುಡಗ ಸಿಕ್ಕ ಮ್ಯಾಗ**
**ಮಗಳಿಗೆ ಹೇಳ್ಯಾನ**
**ಬೂದಿಗಾಗಿ ಬಂಗಾರ ಕಳಕೊಳ್ಳುದ**
**ಅಲ್ಲ ಶಾಣೆತಾನ.** [೨೬]

ಕಾಮ ಬೂದಿ; ಶೀಲ ಬಂಗಾರ. ಬೂದಿಗಾಗಿ ಬಂಗಾರ ಕಳೆದುಕೊಳ್ಳಬಾರದೆನ್ನುವುದು ಈ ಕಾವ್ಯ ನೀತಿ. ಅವರ ಪ್ರೀತಿಯ ಹಾಡುಗಳ ತುಂಬ ಈ ಚರ್ಚೆ ಹರಡಿಕೊಂಡಿದೆ. ಪ್ರೀತಿ ಮೈಬಿಟ್ಟು ಮನಸ್ಸುಗಳಲ್ಲಿಯೇ ಬೆಳೆಯುತ್ತದೆ.

ಇಂಥದ್ದೇ ಇನ್ನೊಂದು ಹಾಡು ಅತ್ತಿಯ ಮಗಳ ಪಾಡು. ಅತ್ತಿಯಮಗಳು ಬಂದಿದ್ದಾಳೆ. ಅವಳ ಮೇಲೆ ಅವನಿಗೆ ಮನಸ್ಸು. ಅವಳಿಗೆ ತನ್ನ ಎಲೆತೋಟ ತೋರಿಸುವ ಆಶೆ.

**ಬಂದ ನೋಡS ತ್ವಾಟ ಬಲು ತಂಪ । ಎಲಿ**
**ತಿಂದ ನೋಡS ನೀ ತುಟಿ ಕೆಂಪ.** [೨೭]

ತೋಟದಲ್ಲೊಂದು ಮನೆ ಕಟ್ಟಿದ್ದಾನೆ. ಅಲ್ಲಿ ಗಿಳಿಯಾಡಲು ಜಾಗ ಬಿಟ್ಟಿದ್ದಾನೆ. ಆದರೆ ಅಲ್ಲಿ ಆಡಬೇಕಾದ ಗಿಳಿ ಹಾರಿ ಹೋಗಲು ಹವಣಿಸುತ್ತಿದೆ. ಅವಳಿಗೆ ಬೇರೆ ಹುಡುಗನೊಂದಿಗೆ ಮದುವೆ ನಿಶ್ಚಯವಾಗಿದ್ದು ಇವನಿಗೆ ಗೊತ್ತಿದೆ. ಅವಳನ್ನು ಅಲ್ಲಿಗೆ ಕರೆದೊಯ್ದು ಮೋಜು ಮಾಡುವುದು ಹೊಂಚು. ಅವಳಿಗೆ ಲಗುಮಾಡಿ ಪಾರಾಗುವ ಹಂಚಿಕೆ. ಆತ ತನ್ನಮ್ಮ ನುಂಗಬಹುದೆನ್ನುವ ಅಂಜಿಕೆ. ಅದಕ್ಕೆ ಅವಳಿಗೆ ಮತ್ತೊಂದು ದಿನ ಕಳೆಯಲು ಹಿಂಜರಿಕೆ. ಮರುದಿನ ಹೋಗುವ ಅತ್ತಿಯ ಮಗಳನ್ನು ತಡೆಯಲು ಸೂರ್ಯನಿಗೆ ಹುಟ್ಟದಿರುವಂತೆ ತಾಕೀತು ಮಾಡುವನು.

---

೨೫. ಹುಡಗಾ ಹೇಳಲೇನೊ : ಹಾಡುಣು ಬಾರS ಪ್ರೇಮದ ಹಾಡಾ : ಪುಟ–೪೯
೨೬. ಹೊಲಾ ಕಾಯು ಹುಡಗಿ : ಹಾಡುಣು ಬಾರS ಪ್ರೇಮದ ಹಾಡಾ : ಪುಟ–೧೦
೨೭. ಅತ್ತಿಯ ಮಗಳಿಂದ ಬಂದಿSಯ : ಹಾಡುಣು ಬಾರS ಪ್ರೇಮದ ಹಾಡಾ : ಪುಟ–೧೬

ತಾಕೀತ ಮಾಡಿsನ ಕೋಳಿಗೆ । ಕೂಗ
ಬ್ಯಾಡಂತ ಒಂದಿನ ನಾಳಿsಗೆ. ೨೮

ಹುಟ್ಟ ಬೇಡವೆಂದರೆ ಸೂರ್ಯ ಹುಟ್ಟದಿರುವನೆ ? ಕೂಗಬೇಡವೆಂದರೆ ಕೋಳಿ ಕೇಳುವುದೆ ? ಇದೇ ಕಾರಣದಿಂದಾಗಿ ಇಟ್ಟಣ್ಣವರ ಪ್ರೇಮದ ಹಾಡು ಕವಲು ಹಾದಿಯಲ್ಲಿ ಕೊನೆಗೊಳ್ಳುವುದು.

ಜಾತಿ ಅಂಬೂದು ಹಿರಿಯಾರ ಬೂತಾ
ಜಾತ್ಯಾಗೇನsತಿ
ಪ್ರೀತಿ ಜಳಕಾ ಮಾಡಿ ನಮ್ಮನಾ
ಬಂಗಾರಾಗೇತಿss. ೨೯

ಎನ್ನುವ ಪ್ರೇಮಿಗಳು ಕೆಲವೊಮ್ಮೆ ಸಾಮಾಜಿಕ ಅವಗಡಗಳನ್ನು ಉಲ್ಲಂಘಿಸಲು ಪ್ರಯತ್ನಿಸುವರು. ಸಾಮಾಜಿಕ ವ್ಯವಸ್ಥೆಯನ್ನು ದೂರುವರು. ಸಾಂಸ್ಥಿಕ ನೆಲೆಯಿಂದ ಪಾರಾಗಿ ನಿಸರ್ಗ ನೆಲೆ ಹುಡುಕಲು ಯೋಚಿಸುವರು.

ಊರ ಬಿಟ್ಟ ನಾವ ದೂರ ಹೋಗಿ
ಸೇರೂಣು ಆರ್ರ್‍ಯಾಣ
ಊರಾಗ ಜೀವಕ ಹೈರಾಣ
.......................................................
ಅಡಿವ್ಯಾಗ ನಮ್ಮನ್ನ ಕಾಡಾವರಿಲ್ಲ
ಅಡವಿ ಪ್ರಾಣಿ ಮೇಲ
ಊರಾಗಿದ್ದರ ಹೊಳಿ ಪಾಲ
ನಾನೂ ನೀನು ಪ್ರೇಮದ ನದಿಗೆ
ಹಾಕುಣು ಹರಿಗೋಲ
ಹರದ್ಹಂಗ ಹೋಗೂಣು ಅನುಗಾಲ. ೩೦

ಪ್ರೇಮದ ದೋಣಿಯಲ್ಲಿ ತೇಲುವ, ಬೆಟ್ಟದ ನೆತ್ತಿಯ ಮೇಲೆ ಹೆಜ್ಜೆ ಊರುವ, ಆಕಾಶದಲ್ಲಿ ಹಕ್ಕಿಯಾಗಿ ಹಾರುವ ಕನಸು ಹೊಸೆಯುತ್ತಾರೆ. ಸಾಮಾಜಿಕ ಸೀಮೆ ದಾಟಿ ಪ್ರೀತಿಯ ಸೀಮೋಲ್ಲಂಘನ ಆಚರಿಸುವ ಆಶೆ. ನಾಳೆಗಳ ಪರಿವಿಯಿಲ್ಲದೆ ಬೆಚ್ಚನೆಯ ಬೆಸುಗೆಯಲ್ಲಿ ಒಂದಾಗ ಬಯಸುವರು.

ಹ್ಯಾಂಗೋ ಏನೋ ಒಂದಾಗೀವ
ಮನಸ ಮನಸ ಮೆಚ್ಚಿ
ಹಾಡುಣು ಗಲ್ಲ ಗಲ್ಲ ಹಚ್ಚಿ

೨೮. ಅದೇ. ಪುಟ-೧೭
೨೯. ಗರದಿ ಗಮ್ಮತ : ಹೋಳಿಸಾಲ ಬಳ್ಳಿ : ಪುಟ-೨
೩೦. ಹಾಡುಣು ಬಾರs ಪ್ರೇಮದ ಹಾಡಾ : ಹಾಡುಣು ಬಾರs ಪ್ರೇಮದ ಹಾಡಾ : ಪುಟ-೨

**ನಾಳಿನ ಗೋಳಾ ನೆನಸೊದು ಬ್ಯಾಡ**
**ಛಿ ನನ್ನ ಹುಚ್ಚಿ**
**ಬಾಳೋಣು ಪ್ರೀತಿ ಹಣ್ಣ ಕಚ್ಚಿ. ೩೧**

ಹುಡುಗ ತನ್ನ ಪ್ರೀತಿಯ ಚಂದದ ಪಾರಿವಾಳವನ್ನು ಅಂಗಳದ ಗೂಡಿನಲ್ಲಿಟ್ಟು, ಕಾಳಿನ ಗುಟುಕು ಕೊಟ್ಟು ಸಾಕುವನು. ಅಂದ-ಚಂದಕ್ಕೆ ಮಾರು ಹೋಗಿ ಅದರೊಡನೆಯೇ ಆಡುವನು.

ಬೆಳ್ಳಾನ ನೀರಿಗಿ ಗರಿಗರಿ ಅದರ
ಮೈಯಿ ಸಾಪ ಸಾಪ
ಬೆಳ್ಳಾಣ ಬಣ್ಣಾ ಚಂದಾನ ಕಣ್ಣ
**ಮೂಗ ಚೂಪ ಚೂಪಾ. ೩೨**

ತೆಳ್ಳನೆಯ ಬೆಳ್ಳನೆಯ ಪಾರಿವಾಳ ಬದುಕಿನುದ್ದಕ್ಕೂ ತನ್ನ ಜೊತೆಯಲ್ಲಿಯೇ ಇರಬೇಕೆಂಬುದು ಅವನ ಬಯಕೆ. ಆದರೆ ಎದೆಮನೆಗೆ ಕರೆಯದೆ ಅಂಗಳದ ಗೂಡಿನಲ್ಲಿಯೇ ಕೂಡಿ ಹಾಕುವ ಹುನ್ನಾರ.

**ಅಂಗಳ ಗೂಡಾಗ ಆಡೂತ ಇರಬೇಕ**
**ಅನ್ನೂದ ನನ ಬಯಕಿ**
**ಮತ್ಯಾಕ ಹ್ವಾದರ ಸರಿವುದ ದೂರ**
**ಪಾರಿವಾಳ ಬೆರಕಿ. ೩೩**

ಅಂಗಳದಾಟಕ್ಕೆ ಪಾರಿವಾಳ ಬೇಕು ಎದೆಯ ಬೇಟಕ್ಕೆ ಬೇಡ. ಜಾತಿ, ರೀತಿ ಸಂಪ್ರದಾಯಗಳನ್ನು ದಾಟಿ ನಿಲ್ಲುವ ಹಂಬಲ ಗಂಡಿಗೆ ಇಲ್ಲ. ಪ್ರೀತಿಗೆ ಸಾಮಾಜಿಕ ಮಾನ್ಯತೆ ದೊರಕಿಸುವ ಛಲ ಇಲ್ಲ. ಸಂಪ್ರದಾಯದ ನೂಲಿನಿಂದ ಹೊರಬರುವ ಮನಸ್ಸು ಹೆಣ್ಣಿಗೂ ಇಲ್ಲ. ಭಾರತೀಯ ಮನಸ್ಸುಗಳು ಮದುವೆಯ ಹಸೆಯ ಸುತ್ತಲೇ ಸುತ್ತುವವು. ಮದುವೆಗೆ ಒಪ್ಪಿದರೆ ಮಾತ್ರ ಹೆಣ್ಣು ಮದುವೆಯ ಮೊದಲು ತನ್ನನ್ನು ನಲ್ಲನಿಗೆ ಒಪ್ಪಿಸಲು ಒಪ್ಪಬಹುದು ಅಥವಾ ಒಪ್ಪಿಸಿಕೊಳ್ಳುವ ಮಾತು ಕೊಡಬಹುದು. ಅಂದರೆ ಭಾರತೀಯ ಪ್ರೀತಿ ಸಮುದಾಯದ ಒಪ್ಪಿಗೆಗೆ ಒತ್ತಾಯಿಸುತ್ತದೆ. ಸಮುದಾಯ ಒಪ್ಪದ ಪ್ರೀತಿ ಅನೈತಿಕವೆನಿಸುತ್ತದೆ. ಆದ್ದರಿಂದ ಭಾರತೀಯ ಮನಸುಗಳು ನೈತಿಕ ಚೌಕಟ್ಟಿನಲ್ಲಿಯೇ ವ್ಯವಹರಿಸಲು ಯತ್ನಿಸುತ್ತವೆ. ಸ್ತ್ರೀಗೆ ಪುರುಷನಿಗಿಂತಲೂ ಭಯ ಹೆಚ್ಚು. ಏಕೆಂದರೆ ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣನ್ನು ಶೀಲದ ನೇಣಿಗೆ ತೂಗಲಾಗುತ್ತದೆ. ಅದಕ್ಕಾಗಿ ಅವಳು ತುಂಬ ಎಚ್ಚರದಿಂದ ಹೆಜ್ಜೆ ಇಡುತ್ತಾಳೆ.

ಚಂದದ ಪಾರಿವಾಳಕ್ಕೆ ಅಂಗಳದ ಗೂಡು ದಾಟಿ ಪಡಸಾಲೆಗೆ ಬರುವ ಆತುರ. ಅದಕ್ಕೆ ಪ್ರೀತಿಯ ಅಧೀಕೃತತೆಗೆ ಸಾಮಾಜಿಕ ಮುದ್ರೆ. ಆದರೆ ಮನೆಯವರ ಅನುಮತಿ ಸಿಗಲಿಲ್ಲ.

---

೩೧. ಅದೇ. ಪುಟ-೨
೩೨. ಚಂದದ ಪಾರಿವಾಳ : ಹಾಡುಣು ಬಾರs ಪ್ರೇಮದ ಹಾಡಾ : ಪುಟ-೨೨
೩೩. ಅದೇ.

'ಮನಿಯಾಗ ಬಂದರ ಪಕ್ಕ ಕೀಳುವ' ಬೆದರಿಕೆ. ಪಾರಿವಾಳ ಹೆದರಿತು, ಮುದರಿತು, ಹಾರಿತು–

ಕಾಯಮು ತನಗ ಅಂಗಳೆನ್ನುವ
ಸಂಶೆ ಅದಕ ಆತ
ಅಂಗಳದಾಗ ಆಡೂದ ಒಲ್ಲೆಂತ
ನಿನ್ನೆ ಹಾರಿ ಹೋತ. [೩೪]

ಪಾರಿವಾಳ ಅರ್ಥಪೂರ್ಣ ಪ್ರತಿಮೆ. ಭಾರತೀಯ ಹೆಣ್ಣಿಗೆ ಸೂಕ್ತ ಉಪಮೆ. ಅಂಗಳ–ಪಡಸಾಲೆಗಳ ಅಂತರ ಮಾರ್ಮಿಕವಾದುದು. ಹೀಗೆ ಕವಿ ಶ್ರೀರಾಮ ಇಟ್ಟಣ್ಣವರ ಪ್ರೀತಿಯ ಮೀಮಾಂಸೆ ಸಂಪ್ರದಾಯದ ಸೀಮೆ ದಾಟುವುದೇ ಇಲ್ಲ. ಈ ದೌರ್ಬಲ್ಯ ಏಕಪಕ್ಷೀಯವಲ್ಲ. ಇಬ್ಬರಲ್ಲೂ ಇದೆ.

ಹೆಣ್ಣು ಮನಸ್ಸು ಕೊಡುತ್ತಾಳೆ ಆದರೆ ಬಹಳಷ್ಟು ಸಂದರ್ಭಗಳಲ್ಲಿ ದೇಹ ಕೊಡುವುದಿಲ್ಲ. ಮನಸ್ಸು ಅಭೌತಿಕ : ದೇಹ ಭೌತಿಕ. ಮನಸ್ಸು ಕೊಟ್ಟಿದ್ದು ಯಾರಿಗೂ ಕಾಣುವುದಿಲ್ಲ; ದೇಹ ಅರ್ಪಿಸುವುದು ಜಗತ್ತಿಗೆ ತಿಳಿಯುತ್ತದೆ. ಅದಕ್ಕೆ ಅದು ಅನೈತಿಕವಾಗುವುದೆಂಬ ಭಾವನೆ. ಆದರೆ ನೈತಿಕ–ಅನೈತಿಕ ಅಥವಾ ಶೀಲ–ಅಶ್ಲೀಲ ಮನಸ್ಸಿನ ಭಾವಗಳು. ಇಟ್ಟಣ್ಣವರ ಕಾವ್ಯ ಈ ಜಿಜ್ಞಾಸೆಯಿಂದ ಹೊರಬರುವುದೇ ಇಲ್ಲ. ಕೆಲವೊಮ್ಮೆ ಆಳವಾಗಿ ಚಿಂತಿಸುತ್ತದೆ. ಜಾತಿಗೋಡೆ ಕೆಡವಿ ಬಯಲು ಸೃಷ್ಟಿಸಲು ಯೋಚಿಸಿದರೂ ಸಾಧ್ಯವಾಗುವುದಿಲ್ಲ. ನಮ್ಮ ನವೋದಯ ಪರಂಪರೆಯೇ ಇದಕ್ಕೆ ಕಾರಣ. ಸತ್ಯ–ಶಿವ–ಸೌಂದರ್ಯದ ಆರಾಧನೆಯ ಬೆನ್ನೇರಿದ ನೈತಿಕತೆ ಅದನ್ನು ಆಳುತ್ತದೆ. ಪ್ರೇಮ ವಿವಾಹದ ಗರದಿ–ಗಮ್ಮತ್ತನ್ನು ಹಳ್ಳಿಗೆ ತೋರಿಸಲೇಬೇಕೆಂಬ ಒತ್ತಾಸೆ ಕರಗುತ್ತದೆ. 'ಕ್ಯಾದಿಗೆ ಬನದಾಗ । ಹಚ್ಚನ ಹುಲ್ಲಾಗ । ಆಡಿsದ್ದಾಡಿದ ಮಾತು ಉಳಿಯಲಿಲ್ಲ'. ಚಂದ್ರ ಮುಳುಗುವನು. ಕತ್ತಲು ಕವಿಯುವುದು. ಕಾಣದ ಕೈಯೊಂದು ದಾರಿ ತೋರುವ ದೀಪ ಕಸಿಯುವುದು. ಪ್ರೇಮದ ದಾರಿ ಕುಸಿಯುವುದು.

ಬಂಗಾರದ ಕನಸುಗಳು ಒಡೆಯುತ್ತವೆ. ಮನದೊಳಗಣ ಮನೆ ಮುರಿಯುತ್ತದೆ. ಪ್ರೀತಿಯ ಆಟ ಮುಗಿಯುತ್ತದೆ. ಆಗ

ಅರಿಯಲಿಲ್ಲ ನೀನು
ನನ್ನೆದಿ ಒಳ ಬೆಳಕ
ಆಡಿsದ್ದಾಡಿದ ಮಾತ ಉಳಿಲಿಲ್ಲಾ
ಎಷ್ಟ ಪ್ರೀತಿನೀರ
ಹಾಕಿದರೂ ಕೈಯಾರ
ಯಾಕೋ ಮಲ್ಲಿಗೆ ಬಳ್ಳಿ ಬೆಳಿಲಿಲ್ಲಾ. [೩೫]

ಎಂದು ಪ್ರೀತಿಯ ಹುಡುಗಿ ಕನವರಿಸುತ್ತ ನೆನಪುಗಳ ಹೊರೆ ಹೊತ್ತು ಕವಲುದಾರಿಯಲ್ಲಿ ಹೆಜ್ಜೆ ಹಾಕುವಳು.

---

೩೪. ಅದೇ.
೩೫. ಕವಲ್ದಾದಿ : ಹಾಡುಣು ಬಾರs ಪ್ರೇಮದ ಹಾಡಾ : ಪುಟ–೫೩

ತೋಽರದಾಂಗ ಹಾದಿ
ಬೆಳಗೂ ದೀಪಾ ಊದಿ
ಕಾಣದ ಕೈಯಾಟ ಮಡದೇನೋ
ಸುತ್ತ ಕತ್ತಲ ಕಾಳ
ಚಂದ್ರಾಮ ಮಣಿಗ್ಯಾನ
ನೆನಪಿನಾಸರ ಮ್ಯಾಲ ನಡದೇನೋ. [೩೬]

ವಿವಾಹಪೂರ್ವ ಪ್ರೀತಿಯ ದಾರಿ ಕವಲಾಗುವುದು ಭಾರತೀಯ ಸಮಾಜದ ಪಾಡು. ಮಾವನ ಮಗಳನ್ನೂ ಅಕ್ಕನ ಮಗಳನ್ನೂ ಪ್ರೀತಿಸಿ ಮದುವೆಯಾಗಬಹುದು. ನೆರೆಮನೆಯ ಹುಡುಗಿಯ ಪ್ರೀತಿಸಿ ವಿವಾಹವಾಗುವುದು ಕಷ್ಟಾತಿಕಷ್ಟ. ಡಾ॥ ಇಟ್ಟಣ್ಣವರ ಶುದ್ಧ ಪ್ರಣಯ ಕಾವ್ಯದ ಕನ್ನಡದ ಮೊದಲ ಕವಿ. ಆದರೆ ಬಹಳಷ್ಟು ಕವಿತೆಗಳಲ್ಲಿ ವಿವಾಹಪೂರ್ವ ಪ್ರಣಯಗಳ ದೋಣಿ ತೀರ ಸೇರುವುದೇ ಇಲ್ಲವೆಂಬ ಆತಂಕ ಎದುರಾಗುತ್ತದೆ. 'ಹೊಳಿದಂಡಿ ಮ್ಯಾಗ ಚೆಲ್ಲಿದ ಬೆಳದಿಂಗಳೊಳಗೆ' ಆರಂಭಗೊಳ್ಳುವ ಅವರ ಪ್ರಣಯದ ಹಾಡು 'ಕವಲ್ಹಾದಿ'ಯಲ್ಲಿ ಕೊನೆಗೊಳ್ಳುವುದು ಸೋಜಿಗ. ಇದು ಪ್ರೇಮದ ಹಾಡಿನ ನೈತಿಕ ಮಿತಿ ಎನಿಸುತ್ತದೆ. ಅದು ಪರಂಪರಾಗತ ಮನೋಧರ್ಮವನ್ನು ಮೀರುವುದಿಲ್ಲ 'ಗರದಿ ಗಮ್ಮತ್ತು' ಕಾಣುವುದೇ ಇಲ್ಲ.

ಇನ್ನೊಂದು ನಿಟ್ಟಿನಿಂದ ಯೋಚಿಸಿದಾಗ ಪ್ರಣಯ ವಿವಾಹದಲ್ಲಿ ಕೊನೆಗೊಳ್ಳಬೇಕೆಂಬುದು ಕೂಡಾ ಭಾರತೀಯ ಮನಸ್ಸಿನ ಯೋಚನೆಯೇ. ಪ್ರೇಮಕ್ಕೂ ವಿವಾಹಕ್ಕೂ ತಳಕು ಹಾಕುವುದೇ ತಪ್ಪು. ವಿವಾಹದ ಚೌಕಟ್ಟಿಗೆ ಪ್ರೀತಿಯನ್ನು ಒಗ್ಗಿಸುವ ಪ್ರಯತ್ನ ಒಂದು ಸಾಂಸ್ಥಿಕ ಒತ್ತಡ. ಆ ಒತ್ತಡದ ಹೊರಗಿದ್ದು ಶುದ್ಧ ಪ್ರೀತಿಯನ್ನು ಆಸ್ವಾದಿಸಲು ಡಾ॥ ಇಟ್ಟಣ್ಣವರ ಕಾವ್ಯ ಓದಬೇಕು. ಅದರ ವ್ಯಾಪ್ತಿ ಪರಿಮಿತಿಗಳ ಚಿಂತೆ ಬಿಟ್ಟು ಅಲ್ಲಿಯ ಪ್ರಣಯ ಸಂವೇದನೆಗಳನ್ನು ಆನಂದಿಸಬೇಕು. ಆಗ ಈ ಕಾವ್ಯ ಕುವೆಂಪು, ಬೇಂದ್ರೆ, ನಾಡಿಗ, ಇಮ್ರಾಪೂರ, ಕೆ.ಎಸ್.ಎನ್. ಆನಂದಕಂದ ಮೊದಲಾದ ಕವಿಗಳ ಪ್ರೇಮಕವಿತೆಗಳಿಂದ ಭಿನ್ನವಾಗಿ ತನ್ನ ಅನನ್ಯತೆ ಸಾಧಿಸುತ್ತದೆ. ಪ್ರೀತಿಸಿದ ಹುಡುಗಿ ಮನೆಯವರ ಒತ್ತಾಯಕ್ಕೂ ಮತ್ತೊಬ್ಬನನ್ನು ಕೈ ಹಿಡಿದಾಗ ಹುಡುಗನಿಗೆ ದುಃಖ ಒತ್ತರಿಸಿ ಬರುತ್ತದೆ. ಆ ಅನಿವಾರ್ಯತೆಯ ಅರಿವು ಇಬ್ಬರಿಗೂ ಇದೆ. ಆಗ ಹಿಂದಿನ ಸವಿನೆನಪುಗಳೆಲ್ಲ ದುಃಖಕ್ಕೆ ಆಕರಗಳಾಗುವವು.

ಹೊನ್ನ ಹೂಗಳ ಬಯಸಿ ಮರಿದುಂಬಿ ನಗುವಾಗ
ಹುಣ್ಣಿಮೆಯ ಚಂದಿರನು ಉದಿಸುವಾಗ
ನನ್ನ ಮನೆ ಪಂಜರದ ಗಿಳಿ ನಕ್ಕು ನುಡಿವಾಗ
ನಿನ್ನ ನೆನಪೇ ಶೋಕ ತಪ್ತರಾಗ. [೩೭]

ಪ್ರೇಮದ ಆಟದ ಕೊನೆಯಿದು ಮಳೆನಿಂತ ಮೇಲೆಯೂ ಕಾಡುವ ಮರಹನಿಗಳಂತೆ. ಆ ನೆನಪು ಕಾಡುವವು. ಇಲ್ಲಿ ಪ್ರೇಮಿಗಳು ಪರಸ್ಪರರನ್ನು ಶಪಿಸದೇ ಬದುಕಿನ ಪರಿಸ್ಥಿತಿಯ, ಸಾಮಾಜಿಕ

೩೬. ಅದೇ, ಪುಟ-೫೪
೩೭. ಹಾರೈಕೆ : ಹೊಳೆಸಾಲ ಬಳ್ಳಿ : ಪುಟ-೪೯

ಒತ್ತಡವನ್ನು ಅರಿತುಕೊಂಡು ಬದುಕಿಗೆ ಹೊಂದಿಕೊಳ್ಳುವುದು ಶ್ಲಾಘನೀಯ. ವಿದಾಯದಲ್ಲಿಯೂ ಶುಭ ಹಾರೈಸುವ ಗ್ರಾಮೀಣ ಪ್ರೇಮಿಗಳ ಮನಸ್ಸು ನಿರ್ಮಲವಾದುದು.

ಸಂಗಾತಿಯೊಡಗೂಡಿ ತುಂಬು ಸಂತಸದಿಂದ
ಬಾಳದೋಣಿಯನೇರಿ ತೀರ ಸೇರು;
ಅನವರತ ಹಾಲ್ಜೇನ ಹೊಳೆಯಲ್ಲಿ ಮೀಯುತಿರು
ಇದು ನನ್ನ ಹಾರೈಕೆ ಸುಖಿಯಾಗಿರು. ೩೮

ಇದು ಪ್ರೇಮದ ಪರಾಕಾಷ್ಠೆ. ಇಟ್ಟಣ್ಣವರ ಕಾವ್ಯ ಪ್ರೇಮದರ್ಶನದ ಅನಿರ್ವಚನೀಯ ಆನಂದ ತಂದು ಕೊಡುವುದಕ್ಕೆ ಈ ಉದಾತ್ತ ಪ್ರಣಯ ಭಾವವೇ ಕಾರಣ.

## ೩.೨. ದಾಂಪತ್ಯ ಗೀತೆಗಳು :

ಹೆಣ್ಣು-ಗಂಡುಗಳೆಂಬ ಎರಡು ಬೇಳೆಗಳು ಪ್ರೇಮದ ಬಂಧದಲ್ಲಿ ಹಸುಗೆಗೊಂಡ ಇಡಿಗಾಳು. ದಾಂಪತ್ಯ ಕುಟುಂಬ ಕಲ್ಪನೆಯ ಬೀಜ. ಅದೊಂದು ಪವಿತ್ರವಾದ ಭಾವಬಂಧ-ಜೀವಬಂಧ-ಅನುರಾಗದ ಸಂಪ್ರಬಂಧ. ಕನ್ನಡದಲ್ಲಿ ದಾಂಪತ್ಯ ಕಾವ್ಯ ಪರಂಪರೆ ವಿಶಿಷ್ಟವಾದುದು. ಕೆ.ಎಸ್.ನರಸಿಂಹಸ್ವಾಮಿಯವರ 'ಮೈಸೂರು ಮಲ್ಲಿಗೆ' ದಾಂಪತ್ಯ ಪ್ರೇಮದ ಕೆನೆಬೆಲ್ಲ. ಬೇಂದ್ರೆಯವರ ಸಖೀಗೀತ, ಕುವೆಂಪು ಅವರ 'ಚಂದ್ರಮಂಚಕೆ ಬಾ ಚಕೋರಿ', ಮಧುಚಂದ್ರ, ಜೇನಾಗುವಾ, ಸುಮತೀಂದ್ರ ನಾಡಿಗರ ದಾಂಪತ್ಯ ಕಾವ್ಯ ಈ ಪರಂಪರೆಯ ಪ್ರಮುಖ ಕಾವ್ಯಗಳು. ಈ ಪರಂಪರೆಯಲ್ಲಿಯೇ ಇಟ್ಟಣ್ಣವರ ದಾಂಪತ್ಯಗೀತೆಗಳನ್ನು ಅವಲೋಕಿಸಬೇಕು.

ಶಿಶುಗೀತೆಗಳನ್ನು ಹೊರತು ಪಡಿಸಿದರೆ ಇಟ್ಟಣ್ಣವರ ಕಾವ್ಯ ಸಂಕಲನಗಳು ನಾಲ್ಕು. ಮೊದಲ ಮೂರು ಕವನ ಸಂಕಲನಗಳ ತುಂಬ ದಾಂಪತ್ಯಗೀತೆಗಳು ಚಲ್ಲುವರಿದಿವೆ. ಹೊಳಿಸಾಲ ಬಳ್ಳಿಯ ಬಹುಪಾಲು ಕವಿತೆಗಳು ದಾಂಪತ್ಯಗೀತೆಗಳು. ಪ್ರೇಮದ ಹಾಡಿನಲ್ಲಿ ೮ ಹಾಗೂ 'ಗಾಲಿ ಉಳ್ಳತೈತಿ' ಸಂಕಲನದಲ್ಲಿ ಮೂರು. ಇವರ ಕಾವ್ಯದಲ್ಲಿ ೨೦ ಕ್ಕೂ ಹೆಚ್ಚು ದಾಂಪತ್ಯ ಗೀತೆಗಳಿದ್ದು, ದಾಂಪತ್ಯದ ಸರಸ-ವಿರಸ-ಸಮರಸಕ್ಕೆ ಕನ್ನಡಿ ಹಿಡಿಯುತ್ತವೆ. ಪ್ರೀತಿ ಈ ಗೀತೆಗಳ ಸ್ಥಾಯಿ. ಹಾಸ್ಯ, ಕೋಪ, ಭಯ, ಉತ್ಸಾಹಾದಿಗಳೆಲ್ಲ ಸಂಚಾರಿ ಭಾವಗಳು. ಇಟ್ಟಣ್ಣವರ ಕಾವ್ಯ ಗ್ರಾಮೀಣ ಬದುಕಿನ ದಾಂಪತ್ಯದ ಚಿತ್ರ ಸಂಪುಟ. ಅಲ್ಲಿ ತಿರಸೆಟ್ಟ ಗಂಡ, ಕಿಟಿಕಿಟಿ ಹೆಂತಿ ಇದ್ದರೂ 'ಕಂಡಾಪಟ್ಟೆ ಜಗಳ್ಯಾಡಿ ತಾಸಿನ್ಯಾಗ' ಕೂಡುತ್ತಾರೆ. ಜೋಡೆತ್ತಿನ ಬಂಡಿ ಕಟ್ಟಿ ಜೋಡಿಯಾಗಿ ಜಾತ್ರೆಗೆ ಹೋಗುತ್ತಾರೆ. ದೇವರಿಗೆ ಜೋಡು ಕಾಯಿ ಒಡೆಸಿ, ಬೆಂಡ ಬೆತ್ತಸಗೂಡ ದುಂಡ ಮಲ್ಲಿಗೆ ದಂಡಿ ತಕ್ಕೊಂಡು ಬರುತ್ತಾರೆ. ಜನಪದರು ಗಾಡಿಯನ್ನು ದಾಂಪತ್ಯದೊಂದಿಗೆ ಸಮೀಕರಿಸಿ ನೋಡುತ್ತಾರೆ.

ಗಾಲಿಯ ದನಿಗೂಡ
ಹೊಂಟ ದಾರಿಯ ಮ್ಯಾಲ
ಬ್ಯಾನಿ ಬ್ಯಾಸರ ದೂರ ಸರಸೊಣು

---

೩೮. ಅದೇ. ಪುಟ-೩೦

ಮರಕ ಮಾಗಿಯ ಕಾಲ
ಮನಕ್ಕೆಲ್ಲ ಮುಗಳೊಡದ
ಸಂಜೆ ಹೂ ಬಿಸಲಾಗ ಅರಳೂಣು. [೩೯]

ಇದು ಅವರ ದಾಂಪತ್ಯದ ಹಾಡು. ಜನಪದ ಕಾವ್ಯದಲ್ಲಿ ದಾಂಪತ್ಯದ ಹಾಡುಗಳು ಅನೇಕ. ಗಂಡನನ್ನು ಪಳಗಿಸುವ ಹೆಂಡತಿ, ಹೆಂಡತಿಯನ್ನು ಪಳಗಿಸುವ ಗಂಡ ನವಿರು ಹಾಸ್ಯದ ಮೂಲಕ ಮನಕ್ಕೆ ಕಚಗುಳಿ ಇಡುವರು.

ಇಲ್ಲಿಯ ಗಡಿಬಿಡಿ ಗಂಡನದು ಯಾವಾಗಲು ಅವಸರ, ಅವಸರ, ಅವಸರ. ಊಟ, ತಿಂಡಿ, ಕೆಲಸ–ನಿದ್ದಿ ಎಲ್ಲವೂ ಗಡಿಬಿಡಿ. ಗಂಡನ ಗಡಿಬಿಡಿಗೆ ಬೇಸತ್ತ ಹೆಂಡತಿ ಅವನ ಅವಸರದ ಅವಘಡಗಳನ್ನು ಹಾಸ್ಯಮಯವಾಗಿ ಕಥಿಸುತ್ತಾಳೆ.

ಊಟಽಕ ಗಡಿಬಿಡಿ ಯಾ ಹೊತ್ತ । ಗುಂಡ
ಕಲ್ಲಿನಂತಾವ ಹಿಡಿ ತುತ್ತ
ಊಟಽಕ ಯಾತರ ಗಡಿಬಿಡಿ । ಬ್ಯಾಡ
ಅಂದಽರ ನನ್ನಮ್ಯಾಲ ಸಿಡಿಮಿಡಿ. [೪೦]

ಗಡಿಬಿಡಿಯ ಜೊತೆಗೆ ಅವನಿಗೆ ಮರೆವು. ಬಸ್ಸಿನಲ್ಲಿ ಮರೆತು ಬಂದ ಕೈಚೀಲಗಳಿಗೆ ಲೆಕ್ಕವಿಲ್ಲ. ಒಂದು ದಿನ ಗಡಿಬಿಡಿಯಲ್ಲಿ ತನ್ನನ್ನೂ ಮರೆಯಬಹುದೆಂಬ ಭಯ ಅವಳಲ್ಲಿ.

ಶಾರ ನೋಡಾಕ ನಾವ ಹೋಗೂಣ । ಮತ್ತ
ಅಂತಾನ ಗಳಿಗ್ಯಾಗ ತಿರಗೂಣ
ಗಡಿಬಿಡಿ ಮಾಡಿ ಅಲ್ಲಿ ಮರತಽರ । ತಿರಗಿ
ಕರಕೊಂಡ ನನ್ಯಾರ ಬರತಾರ. [೪೧]

ಮತ್ತೊಬ್ಬಾಕೆಯ ಗಂಡ ನಿದ್ದಿ ಬಡಕ. ಅವನಿಗೆ ಯಾವಾಗಲೂ ನಿದ್ದಿಯದೇ ಚಿಂತೆ. ಮುಂಜಾನೆ ಮಧ್ಯಾಹ್ನ, ಸಂಜೆ, ರಾತ್ರಿ ಎಲ್ಲವೂ ನಿದ್ದೆ.

ಉಂಡರ ತೀರಿತ ನಿದ್ದಿಯ ಅವಸರ
ತೇಲಗಣ್ಣ ಚರಕಿ
ಮಗ್ಗಲ ಹಚ್ಚಿ ಮಲಗಿದ ಕೊಡಲೆ
ಸೊರ ಸೊರ ಗೊರಕಿ. [೪೨]

---

೩೯. ಜಾತರಿಗೋಗುಣು ಜಾಣಾ : ಹಾಡುಣು ಬಾರಽ ಪ್ರೇಮದ ಹಾಡಾ : ಪುಟ–೪೫
೪೦. ಗಡಿಬಿಡಿಗಂಡ : ಹಾಡುಣು ಬಾರಽ ಪ್ರೇಮದ ಹಾಡಾ : ಪುಟ–೧೯
೪೧. ಅದೇ.
೪೨. ಗಂಡನ ನಿದ್ದಿ : ಹಾಡುಣು ಬಾರಽ ಪ್ರೇಮದ ಹಾಡಾ : ಪುಟ–೩೫

ಮತ್ತೊಬ್ಬನ ಹೆಂಡತಿ ಬೆರಕಿ. ಗಂಡನಿಗೆ ತಿಳಿಯದಂತೆ ಅವನ ಕಿಸೆಯಲ್ಲಿಯ ಹಣ ಕೀಳುವಳು.

**ಕಡಿಮೆ ಬೀಳತೈತಿ ರೊಕ್ಕ ಕಿಸೆದಾಗ**
**ದಿನಾ ನನಗ ಚಿಂತಿ**
**ನನಗ ತಿಳಿsದಾಂಗ ಎಬ್ಬಸತಾಳು**
**ಬೆರಕಿ ನನ್ನ ಹೆಂತಿ.**

.................................................

**ಮರತ ಮಾಡದಾಗ ರೊಕ್ಕ ಇಟ್ಟರ**
**ಗುಳುಂ ಮಾಡತಾಳು**
**ಹುಡಕ್ಯಾಡಿದರ ಗಂಡಸೂರೆಲ್ಲ**
**ಮರುಗೇಡಿ ಅಂತಾಳು.** [೪೬]

ಎಬ್ಬಿಸಿದ ರೊಕ್ಕ ಕಲೆ ಹಾಕಿ ಗಂಡನಿಗೆ ಸಾಲ ಕೊಡುವ ಹೆಂಡತಿಯ ಬೆರಕಿತನವನ್ನು ಬಣ್ಣಿಸುವ ಈ ಹಾಡು ಹಾಸ್ಯದ ಹೊನಲು ಸೂಸುತ್ತದೆ. ಆದರೆ ಗಂಡನಿಗೆ ತನ್ನ ಹೆಂಡತಿಯ ಬಗ್ಗೆ ಸಿಟ್ಟಿಲ್ಲ.

**ಸಂಸಾರ ಅಂದಮ್ಯಾಲ ಎಲ್ಲಾ ಮನಿಯಾಗ**
**ಇರತಾವ ಈ ಗುಟ್ಟಾ**
**ಕಂಡು ಕಾಣದ್ಹಾಂಗ ಇರಬೇಕ ಹೆಂಡತಿ**
**ಮ್ಯಾಲ ಬ್ಯಾಡ ಸಿಟ್ಟಾ.** [೪೭]

ಇದು ಡಾ॥ ಇಟ್ಟಣ್ಣವರ ಜೀವನ ಸಿದ್ಧಾಂತ. ದಾಂಪತ್ಯದಂಥ ಜತ್ತು, ಸಂಸಾರದಂಥ ಗತ್ತು ಬದುಕಿನಲ್ಲಿ ಮತ್ತೊಂದಿಲ್ಲ. ಆ ಬಂಧದ ಬಿಗಿಯೇ ಅಂಥದ್ದು. ಮದುವೆಯ ಮೊದಲು ಉಂಡಾಡಿ ಗುಂಡನಂತೆ ಬೇಜವಾಬ್ದಾರಿಯಿಂದ ಅಡ್ಡಾಡುವವನು, ಹೆಂಡತಿಯ ತೆಕ್ಕೆಯಲ್ಲಿ ಮೆತ್ತಗಾಗುತ್ತಾನೆ. ಬೆಂಕಿಗೆ ಕಬ್ಬಿಣ ಹದವಾಗುವಂತೆ ಬಡಿದೆಡೆ ಬಾಗುತ್ತಾನೆ, ಜಗ್ಗಿದೆಡೆ ಹಿಗ್ಗುತ್ತಾನೆ. ಹೆಂಡತಿಯೂ ಅಷ್ಟೆ, ತನ್ನ ಸರ್ವಸ್ವವನ್ನೇ ಅವನಿಗೆ ಅರ್ಪಿಸುತ್ತಾಳೆ.

"ಬರತನಂದ ನಲ್ಲಾ..................." ಇಟ್ಟಣ್ಣವರ ಸುಪ್ರಸಿದ್ಧ ದಾಂಪತ್ಯಗೀತೆ. ಹೆಂಡತಿ ಜಾತ್ರೆಗೆಂದು ತವರಿಗೆ ಎಂಟುದಿನ ಮುಂಚೆಯೇ ಬಂದಿದ್ದಾಳೆ. ಬರುವಾಗ ಜಾತ್ರೆ ದಿನ ತಪ್ಪದೇ ಬರಬೇಕೆಂದು ಗಂಡನಿಂದ ಭಾಷೆ ಪಡೆದಿದ್ದಾಳೆ. ಬರುವಾಗ ಎಂಥ (ಉಡುಗೆ) ಡ್ರೆಸ್ ಇರಬೇಕೆನ್ನುವುದನ್ನೂ ತಿಳಿಸಿದ್ದಾಳೆ.

**'ಮಲಮಲ ಅಂಗಿ, ಮರೀದ ಸುತ್ರಿ ಶಮನ ಬಿಟ್ಟ ಪಟಕ**
**ಕುಲುಕುಲು ನಕ್ಕ ಹೇಳಿ ಬಂದಿನ್ನಿ ಸೋಲತಾರ ಹಟಕ.'** [೪೮]

---

೪೬. ಬೆರಕಿ ನನ್ನ ಹೆಂತಿ : ಗಾಳಿ ಉಳ್ಳೈತಿ : ಪುಟ-೮
೪೭. ಅದೇ. ಪುಟ-೯
೪೮. ಬರತನಂದ ನಲ್ಲಾ : ಹೊಲಿಸಾಲ ಬಳಿ : ಪುಟ-೯

ಗಂಡನ ಮನೆಯ ಬಂಡಿ ಬಂತು. ಅಂಗಳದಲ್ಲಿಯ ಮರದ ನೆರಳಲ್ಲಿ ನಿಂತಿತು. ಮನೆಯೊಳಗಿನಿಂದ ಓಡಿ ಬಂದ ಹುಡುಗಿ ತನ್ನ ಗಂಡನನ್ನು ಹುಡುಕುತ್ತಿದ್ದಳು. ಗಂಡ ಬಂದಿಲ್ಲ. ಬದಲಿಗೆ ಅತ್ತೆ-ಮಾವ ಬಂದಿದ್ದಾರೆ. ಹುಡುಗಿ ಮುಖ ಸುಟ್ಟ ಹಪ್ಪಳದಂತಾಯಿತು. ಅತ್ತೆಗೆ ಸೊಸೆಯ ನೋವು ಅರ್ಥವಾಯಿತು. ಆಕೆಯ ಗಂಡ ನಾಳೆ ಬರುವುದಾಗಿ ಹೇಳುತ್ತಾಳೆ. ಆದರೆ ಬತ್ತಿದ ಉತ್ಸಾಹ ಮತ್ತೆ ತುಂಬುವುದಿಲ್ಲ. ಕನಸೊಡೆದ ಆ ಕೋಮಲೆಯ ಭಾವನೆಗಳನ್ನು ಕವಿ ತಮ್ಮ ಕಾವ್ಯ ಕುಂಚದಿಂದ ಅತ್ಯಂತ ನಾಜೂಕಾಗಿ ಚಿತ್ರಿಸಿದ್ದಾರೆ.

**ಇಂದs ಮದ್ದಿನದಾಗ ಒಗದ ತಂದಿನ್ನಿ ಬಣ್ಣದ ಜಮಖಾನ**
**ಬಂದ ಹುಡುಗುರು ಹೊಲಸ ಮಾಡತಾರ ಮಾಡುದ ಅದಕೇನ**
**ಚಂದಾಗಿ ಕಟ್ಟಿದ ಮಲ್ಲಿಗೆ ಮಾಲಿ ಅಲ್ಲೆ ಬಾಡತೈತಿ,**
**ವಾಸನಿ ನನ್ನ ಕಾಡತೈತಿ.** [೪೯]

ಈ ಸಾಲುಗಳು ಇಟ್ಟಣ್ಣವರ ಕಾವ್ಯ ನವಿಲಿನ ಸಾವಿರದ ಕಣ್ಣುಗಳ ಬಣ್ಣದ ಗರಿಗಳು. ಕಾವ್ಯದ ಅಸಲು ರೂಪವಿದು. ಜಮಖಾನದ ಮಡಿ, ಮಲ್ಲಿಗೆಯ ಮೀಸಲು ನಲ್ಲನ ಒಲವು ಸಾರ್ಥಕಗೊಳಿಸುತ್ತವೆ. ಮಾವನ ಮನೆಗೆ ಬರುವ ಕೆ.ಎಸ್. ನರಸಿಂಹಸ್ವಾಮಿಯವರ ರಾಯರನ್ನು ನೆನಪಿಸುವ ಈ ಕವನ ಕನ್ನಡದ ಸರ್ವೋತ್ಕೃಷ್ಟ ದಾಂಪತ್ಯಗೀತೆಗಳಲ್ಲೊಂದು. ಇದು ಇಟ್ಟಣ್ಣವರ ಕಾವ್ಯ ಶೃಂಗದ ಸ್ವರ್ಣಿಮಾ.

ಇಲ್ಲಿಯ ಬಹಳಷ್ಟು ದಾಂಪತ್ಯಗೀತೆಗಳು 'ನೂಲಲ್ಲ್ಯಾಕ ಚೆನ್ನಿ' ಮಾದರಿಯವು. ಜನಪದ ದಾಂಪತ್ಯ ಕಾವ್ಯದಲ್ಲಿ ಹೆಣ್ಣನ್ನು ಕೀಳಾಗಿ ಚಿತ್ರಿಸಲಾಗುತ್ತದೆ. ಆದರೆ ಇಟ್ಟಣ್ಣವರ ಹೆಣ್ಣು-ಗಂಡೆಂಬ ಭೇದ ನೀಗಿಸಿದ್ದಾರೆ.

**ಗಂಡಸ ದೇವರಲ್ಲ**
**ಹೆಣ್ಣ ದಾಸಿಯಲ್ಲ**
**ಇಬ್ಬರಿಗೂ ಪ್ರೀತಿsನ ದೇವರ । ಅದ**
**ಬಡ್ಡಿ ಬೇರಿನ್ಹಂಗ ಆಧಾರ.** [೫೦]

ದಾಂಪತ್ಯದಲ್ಲಿ ಸತಿ-ಪತಿಗಳಿಬ್ಬರದು ಸಮಪಾಲು. ಯಾರದು ಹೆಚ್ಚಲ್ಲ : ಯಾರದು ಕಡಿಮೆಯಲ್ಲ. ಒಬ್ಬರು ಮೋಸ ಮಾಡಿದರೂ ಸಂಸಾರ ನಾಶ.

**ಗಂಡ ಹೇಂತಿಗೆ ಮೋಸ**
**ಹೇಂತಿ ಗಂಡಗ ಮೋಸ**
**ಮಾಡಿದರ ಸಂಸಾರದಾಗೇನತಿ । ಪೂಜಿ**
**ಮಾಡುವ ದೇವರ ಕಲ್ಲಾತಿ.** [೫೧]

---

೪೯. ಅದೇ. ಪುಟ-೧೦
೫೦. ನಾನು ನೀನು ಗಂಡಾ ಹೇಂತಿ : ಹೊಳಿಸಾಲ ಬಳ್ಳಿ : ಪುಟ-೩೬
೫೧. ಅದೇ.

ಇದೇ ಭಾವ ಚೌಕಟ್ಟಿನಲ್ಲಿ ಇಲ್ಲಿಯ ದಾಂಪತ್ಯ ಗೀತೆಗಳು ಸರಸ-ಸಲ್ಲಾಪದ ಕ್ಷಣಗಳನ್ನು ನವಿರಾಗಿ ಅಭಿವ್ಯಕ್ತಿಸುತ್ತವೆ. ದಾಂಪತ್ಯ ಎಂದರೆ ಜೊತೆ.

**ಎತ್ತು ಎರಿsಗೆ ಕ್ವಾಣ ಕೆರಿಗೆ**
**ಎಳದಾಡಿದರ ಸುಖಾ ಯಾರಿಗೆ ?**
**ಸಂಸಾರಂಬುದ ಸವಿಗವಿಮ್ಯಾಗ**
**ಸಾಗಸಬೇಕ ತಿಳಿವಳಿಕ್ಯಾಗ**
**ಮುಳುಗುವಾಗೂ ಈsಸಬೇಕ**
**ಕೈ ಕೈ ತಂದ ತಳಕ ಹಾಕಿ.** [೫೨]

ಬಾಳು ಬೇಳೆಯಾಗಬಾರದು. ಬೇಂದ್ರೆಯವರು ಹೇಳುವಂತೆ ಕಾಳಾಗಿಯೇ ಇರಬೇಕು. ಕಾಳು ಮೊಳೆಯುತ್ತದೆ : ಬೇಳೆ ಕುದಿಯುತ್ತದೆ.

## ೩.೩. ಕೌಟುಂಬಿಕ ಗೀತೆಗಳು :

ಇಟ್ಟಣ್ಣವರ ಪ್ರೇಮ ಸ್ಪಂದನ ಕುಟುಂಬ ಕೇಂದ್ರಿತವಾದುದು. ಅವರ ದಾಂಪತ್ಯ ಗೀತೆಗಳು ಪ್ರೀತಿಯ ಗಟ್ಟಿನ ಮನೆಯನ್ನು ಸಾಕಾರಗೊಳಿಸುತ್ತವೆ. ಅಲ್ಲಿ ತಂದೆ-ತಾಯಿ-ಮಕ್ಕಳು-ಬಂಧು-ಬಳಗ ಎಲ್ಲರೂ ಇರಬೇಕೆನ್ನುವ ಅವಿಭಕ್ತ ಭಾವ.

**ಮಕ್ಕಳ ಪ್ರೀತಿs ಥಳಕ**
**ಮುತ್ತs ಮಾಣಿಕ ಬೆಳಕ**
**ಹಡದ ತಂದಿತಾಯಿ ನಮ್ಮ ಕಣ್ಣ । ಬಂಧು**
**ಬಳಗೆಲ್ಲ ಗಮಗಮ ಹೂ ಹಣ್ಣ.** [೫೩]

ಸುಖದ ಸಂಸಾರ ಜನಪದ ಕಾವ್ಯದ ಆಶಯ. ಕೌಟುಂಬಿಕ ಸಾಮರಸ್ಯ ಹಾರೈಸುವ ಇಂಥ ಕವಿತೆಗಳೇ ಕೌಟುಂಬಿಕ ಗೀತೆಗಳು. ಸಂಸಾರ ಬದುಕಿಗೆ ಭಾರವಾಗದಂತಿರಬೇಕು. "ಹಿಡಿದsರ ಹಿಡಿ ತುಂಬ । ಬಿಟ್ಟರ ಮನಿ ತುಂಬ । ಅನುವ್ಹಾಂಗ ಇರಬೇಕ ಸಂಸಾರಾ" ಆಗ "ಸ್ವರ್ಗದ ಮಾತ್ಯಾಕ । ಭೂಮಿತಾಯಿ ಸಾಕ । ಬಾಳಿsಗಿ ಐಸಿರಿ ತೋರಸಾಕ".

ಮಕ್ಕಳಲ್ಲಿ ಹೆಣ್ಣು-ಗಂಡೆಂಬ ಭೇದ ಬರಬಾರದು ಸಾಮಾನ್ಯವಾಗಿ ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿದಂತೆ ಎಂಬುದು ಜನಪದರ ಭಾವನೆ. ಈ ಕವಿಗೆ ಹೆಣ್ಣು ಹುಟ್ಟಿತೆಂಬ ಕೊರಗಿಲ್ಲ. ಬದಲಾಗಿ ಹೆಮ್ಮೆಯಿದೆ.

**ಅನ್ನವರು ಅನ್ನೀಲಿ ಬೆನ್ಹಿಂದ ಮನಸುದ್ದ**
**ಅನ್ನವರ ಬಾಯಿ ಹಿಡಿಹೊನ್ನ**

---

೫೨. ನಾನು ನೀನು ಗಂಡಾ ಹೇಂತಿ : ಹೊಳಿಸಾಲ ಬಳ್ಳಿ : ಪುಟ-೩೭
೫೩. ಪ್ರೀತಿsನ ಹೆಚ್ಚಿಂದ : ಹಾಡುಣು ಬಾರs ಪ್ರೇಮದ ಹಾಡಾ : ಪುಟ-೨೭

ನನಗೆ ನನ್ನ ಹೇಂತಿಽಗಿ ಹೆಣ್ಣಮಗಳೆಂದರ
ಹೆಣ್ಣಲ್ಲ ನಮಗೆ ರವಿಚೆನ್ನ. [೩೪]

ಮನೆಮಗ ಪುಂಡನಾದಾಗಲೂ ಚಿಂತೆ. ಮಗ ಎಂಥವನಾಗಿದ್ದರೂ ತಿದ್ದಿ ದಾರಿಗೆ ತರಬೇಕೇ ಹೊರತು ಹೊರಹಾಕಲಾಗುವುದಿಲ್ಲ. ನೆರೆಯವರು ಕೂಡ ಅವನ ಉಪಟಳ ಸಹಿಸುವರು.

ಬೆಳೆದ ಮಗಳಿಗೆ ಸಂಬಂಧಗಳು ಬಾರದಿದ್ದರೂ ಚಿಂತೆ. ಈ ಚಿಂತೆ ತಂದೆಗಿಂತಲೂ ಹೆಚ್ಚು ತಾಯಿಗೆ ಕಾಡುವುದು–

ಒಗತಾನ ಬಂದಿಲ್ಲ ಮಗಳಿಗೆ ಮದಿವಿಲ್ಲ
ಹಗಲೆಲ್ಲ ಕಟೆತತಿ ಮನದಾಗ
ತುಂಬೇತಿ ಹದಿನಾರ ಈಗೊಳೆ ಹರೆಬಾರ
ನನ ಮಗಳ ಕುಂತಾಳ ಎದಿಮ್ಯಾಗ. [೩೫]

ಅವಳ ಗೆಳತಿಯರ ಮದುವೆ ಮುಗಿದಿವೆ. ಅವರು ತವರಿಗೆ ಬಂದಾಗ ಗೌರಿ ಮದುವೆಯ ಬಗ್ಗೆ ಕೇಳಿದಾಗ ಮಗಳಿಗೂ ತಾಯಿಗೂ ಇಬ್ಬರಿಗೂ ಉತ್ತರಿಸಲು ತೋಚದು. ಆದರೂ ಆ ತಾಯಿಗೆ ತನ್ನ ಮಗಳ ಮೇಲೆ ಕಿಂಚಿತ್ತು ಬೇಸರವಿಲ್ಲ.

ಗೊಂಬಿ ಹಂತಾ ಮಗಳ ಕುಡ್ಡಲ್ಲ ಕುಂಟೆಲ್ಲಾ
ಇನ್ನ ಕಂಕಣ ಬಲಾ ಕೊಡಿಲ್ಲ;
ಹೆಣ್ಣ ಹುಟ್ಟಿಸಿದಾಂವ ಗಂಡೂ ಹುಟ್ಸಿರತಾನ
ಹಾಕಿನ ಭಾರ ದೇವರ ಮ್ಯಾಲ. [೩೬]

ಮದುವೆಗಳು ಸ್ವರ್ಗದಲ್ಲಿಯೇ ನಿಶ್ಚಯವಾಗಿರುತ್ತವೆ–ಎನ್ನುವ ಜನಪದ ನಂಬಿಗೆ ಸಮಾದಾನಕ್ಕೂ ಕಾರಣವಾಗುತ್ತದೆ.

ಒಂದೊಂದು ಕುಟುಂಬದಲ್ಲಿ ಒಂದೊಂದು ಸಮಸ್ಯೆ. ಒಂದೆಡೆ ಸೊಸೆ ಚೆನ್ನಾಗಿಲ್ಲವೆಂದು ಅತ್ತೆಯವಾದ ; ಮತ್ತೊಂದೆಡೆ ತನ್ನ ಸೊಸೆಯನ್ನು ಮಗ ನಿರ್ಲಕ್ಷಿಸುತ್ತಿದ್ದಾನೆಂಬ ಕಳವಳ. ಸಂಸಾರ ಎಂದರೆ ಈ ಸಮಸ್ಯೆಗಳು ಇದ್ದೆ ಇರುತ್ತವೆ.

ಮದುವೆಯಾದ ಮೇಲೆ ಮಗ ತನ್ನ ತಾಯಿಯಿಂದ ದೂರಾಗಿ ಬೇರೆ ಮನೆ ಮಾಡಿದಾಗ ಆ ತಾಯಿಗೆ ಆಗುವ ದುಃಖ 'ಹೊಳಿ ಹಾದ ಮ್ಯಾಗ' ಹಾಡಿನಲ್ಲಿ ಮಡುಗಟ್ಟಿದೆ. ಸೊಸೆ ತನ್ನ ಮಗನನ್ನು ತನ್ನಿಂದ ಕಸಿಯುವಳೆಂಬ ಭಯ ತಾಯಿಗೆ. ಅತ್ತೆ ತನ್ನ ಮಗನನ್ನು ತನಗೆ ಬಿಟ್ಟು ಕೊಡುತ್ತಿಲ್ಲವೆಂಬ ಆತಂಕ ಸೊಸೆಗೆ. ಮದುವೆಯಾದ ನಂತರ ಮಗ ಹೆಂಡತಿಯ ಪಕ್ಷವಹಿಸಿ ತಾಯಿಯನ್ನು ಬಿಟ್ಟು ಹೊಸ ಸಂಸಾರ ಹೂಡಿದನು. ಮುದುಕಿಯ ಕನಸುಗಳೆಲ್ಲ ಹಾಳಾದವು. ಆಗ ಮುದುಕಿ ಮನದಾಳದ ಅಳಲು ತೋಡಿಕೊಳ್ಳುವುದು–

---

೩೪. ಮಗಳು : ಗಾಲಿ ಉಳ್ಳತ್ಯತಿ : ಪುಟ–೩೮
೩೫. ಕಟೆತ್ಯತಿ ಮನದಾಗ : ಹೊಳಿಸಾಲ ಬಳ್ಳಿ : ಪುಟ–೧೭
೩೬. ಅದೇ. ಪುಟ–೧೮

ಮಲಿ ಕೊಟ್ಟ ಸಲುಹಿದ ತಾಯಿ ಮ್ಯಾಗ
ಮಗನ ರೀತಿ ಹಿಂಗ
ಹುಟ್ಟು ಹಾಕಿಸಿ ಹೊಳಿ ಹಾದ ಮ್ಯಾಗ
ಅಂಬಿಗ್ಯಾನ ಮರತ್ಹಾಂಗ. [೩೭]

ಕವಿ ಈ ಹಾಡಿನಲ್ಲಿ ಯಾರ ಪರವಾಗಿಯೂ ವಕಾಲತ್ತು ಮಾಡುವುದಿಲ್ಲ. ಮುದುಕಿಯ ದುಃಖ ದುಗುಡಗಳಿಗೆ ಧ್ವನಿ ನೀಡಿ, ತನ್ನಷ್ಟಕ್ಕೆ ತಾನು ಉಳಿಯುವನು. 'ಹೊಳಿ ಹಾದ ಮ್ಯಾಗ' ಅತ್ತೆ-ಸೊಸೆಯ ಕಲಹವನ್ನು ಕವನಿಸಿದರೆ ಪ್ರೇಮದ ಹಾಡಿನ 'ಹಚ್ಚಿದಂಗ ಹಣತಿ' ಕವಿತೆ ಅವರ ಸಾಮರಸ್ಯದ ಸುಂದರ ಚಿತ್ರ ಪ್ರದರ್ಶಿಸುತ್ತದೆ.

ಮಗ ಬಡವರ ಮನೆಯ ಹುಡುಗಿ ಬೇಕೆನ್ನುತ್ತಾನೆ. ತಾಯಿ ಶ್ರೀಮಂತ ಮನೆತನದ ಗುಣವಂತಿಯನ್ನು ಸೊಸೆಯಾಗಿ ತರುತ್ತಾಳೆ. ಅವಳಿಗೆ ಕಸ, ಮುಸುರಿ, ಅಡಿಗೆ ಮಾಡಿ ಗೊತ್ತಿಲ್ಲ.

'ಎತ್ತ ಬಾರದ ಕೊಡವ
ಹೊತ್ತ ನೀರಿಗ್ಹೋಗಿ'
ನೀರ ಸೇದ್ಯಾಳ ತಿಳಿ-ತಿಳಿ । ಅಂಗ್ಯೆಯ
ನೆತ್ತರಡ್ಯಾವ ಜಿಳಿ ಜಿಳಿ. [೩೮]

ಅತ್ತೆ ಸೊಸೆಗೆ ಕೆಲಸ ಹಚ್ಚುತ್ತಿಲ್ಲ; ಸೊಸೆ ಅತ್ತೆಗೆ ಕೆಲಸ ಮಾಡಲು ಬಿಡುತ್ತಿಲ್ಲ. ಮಗ ತಾಯಿಗೆ ಹೇಳುತ್ತಾನೆ. "ಸರಿ ಜೋಡಿ ಸಂಬಂಧ ಇರಬೇಕ । ಎವ್ವಾ ಬಡವರ ಹೆಣ್ಣ ತರಬೇಕ" ಆಗ ತಾಯಿ ಹೇಳುತ್ತಾಳೆ.

ತಂದೀನ ಗುಣನಂಬಿ
ಸೊಸೆಯು ಚಂದಾಳ ಗೊಂಬಿ
ಈಗೇನ ಮುಗಲಹರದ ಬಿದ್ದೈತಿ । ನನ್ನ
ಮನಸಿನ್ಯಾನ ಮಾತ ಗೆದ್ದತಿ. [೩೯]

ಹೆಂಡತಿಯ ಬಗ್ಗಿನ ಕಾಳಿಕೆ ಕಳೆದು ಮಗನ ಮನದಲ್ಲಿ ಹಣತೆ ಹಚ್ಚುವ ತಾಯಿ ಕೌಟುಂಬಿಕ ಸಾಮರಸ್ಯಕ್ಕೆ ಸಾಕ್ಷಿಯಾಗುವಳು.

ಕವಿ ಇಟ್ಟಣ್ಣವರ ಕಾವ್ಯದಲ್ಲಿ ದಾಂಪತ್ಯ ಗೀತೆಗಳಿಗೆ ಹೋಲಿಸಿದರೆ ಕೌಟುಂಬಿಕ ಗೀತೆಗಳು ಕಡಿಮೆ. ಅವು ಹೆಚ್ಚು ಸ್ವಗತ ಸ್ವರೂಪದವು. ಬಿಡಿಬಿಡಿಯಾಗಿ ನೋಡಿದಾಗ ಮನಸ್ಸು ರಂಜಿಸುತ್ತವೆ. ಇಡಿಯಾಗಿ ಗ್ರಹಿಸಿದಾಗ 'ಗುಡ್ಡ ಅಗೆದು ಇಲಿ ಹಿಡಿದಂತೆ' ನಿರಾಶೆಗೊಳಿಸುತ್ತವೆ.

---

೩೭. ಹೊಳಿ ಹ್ವಾದ ಮ್ಯಾಗ : ಹೊಳಿಸಾಲ ಬಳ್ಳಿ : ಪುಟ-೧೩
೩೮. ಹಚ್ಚಿದ್ಹಂಗ ಹಣತಿ : ಹಾಡುಣು ಬಾರಽ ಪ್ರೇಮದ ಹಾಡಾ : ಪುಟ-೪೩
೩೯. ಅದೇ.

## ೩.೪. ಸಖ್ಯ ಗೀತೆಗಳು :

ಈ ಕವಿಗೆ ಗೆಳೆತನದ ಗುಟ್ಟು ಅಚ್ಚರಿ ಮೂಡಿಸಿದೆ. 'ಸಖ್ಯ' ಪ್ರೀತಿಯ ಪಾರದರ್ಶಿಕೆ. ಅದು ರಕ್ತಸಂಬಂಧದಾಚೆಯ ಸಂಬಂಧ.

**ಕಳ್ಳ ಬಳ್ಳಿಯ ಮೀರಿ ಸಂಬಂಧ**
**ಬ್ಯಾರೆ ಒಂದ ಐತಿ**
**ರಕ್ತದಚೆಕ ಒಳಗೊಳಗ ಹರಿಽತತಿ**
**ಗೆಳತಿ ಗೆಳ್ಯಾರ ಪ್ರೀತಿ**
**ಬೆಳ್ಳಿ ಬಂಗಾರದ ಆಸೆ ಹರದ ಕುಲಾನಲಿ**
**ಬಿಟ್ಟ ಕೊಟ್ಟ**
**ಜೀವ ಕೂಡತಾವ ಹ್ಯಾಂಗೋ ಏನೊ**
**ಇದ ಏನ ಕಣ್ಣಕಟ್ಟ.** [೬೦]

ಗೆಳೆತನವೇ ಒಂದು ಮೋಡಿ. ಅಲ್ಲಿ ಕುಲ–ನೆಲ–ಬೆಳ್ಳಿ–ಬಂಗಾರದ ತೊಡಕಿಲ್ಲ. ಕರುಳ ಬಳ್ಳಿಯ ಕೊಸರಿಲ್ಲ. ಕಾಯದ ಲವಲೇಶವೂ ಇಲ್ಲದ ಈ ಪ್ರೇಮ ಸಂಬಂಧವೇ ಒಂದು ಅಪರೂಪದ ಚಮತ್ಕಾರ. ಜನಪದ ಜೀವನದಲ್ಲಿ ಹಾಸುಹೊಕ್ಕಾಗಿ ಹೆಣೆದುಕೊಂಡಿರುವ ಸಖ್ಯ ಸಂಬಂಧದ ಚಿಂತನೆಯಲ್ಲಿ ತೊಡಗಿಕೊಳ್ಳುವ ಇಟ್ಟಣ್ಣವರ ಕಾವ್ಯ ಮರೆಯಲಾಗದ ಅನುಭವ ಪ್ರಸ್ತುತ ಪಡಿಸುತ್ತದೆ.

ಇಟ್ಟಣ್ಣವರ ಸಖ್ಯಗೀತೆಗಳ ಸಂಖ್ಯೆ ತೀರ ಕಡಿಮೆ. ಹೋಳಿಸಾಲ ಬಳ್ಳಿ ಹಾಗೂ ಪ್ರೇಮದ ಹಾಡು ಸಂಕಲನಗಳಲ್ಲಿ ಒಂದೊಂದು ಇವೆ. ಗಾಲಿ ಉಳ್ಳತ್ಯೆತಿ ಹಾಗೂ ಹೊತ್ತು ಮೂಡುವ ಸಮಯ ಸಂಕಲನಗಳಲ್ಲಿ ಇಲ್ಲವೇ ಇಲ್ಲ. ಆದರೆ ಗೆಳೆತನದ ಹಸುಗೆಯ ಬಿಸಿ ಸಕ್ಕರೆ ಸೊಗಸು, ಚಲ್ಲುವರೆದಿದೆ. ಈ ಕವಿಗೆ ಸಂಬಂಧಗಳೊಳಗಣ ಪ್ರೀತಿ ಮೀಮಾಂಸೆಯಲ್ಲಿ ಒಲವು.

ಒಡನಾಟದಲ್ಲಿ ಬೆಳೆಯುವ ಗೆಳೆತನ ಅನಂತರ ಜೀವನದ ಜೊತೆಗೂಡಿ ಬರುತ್ತದೆ. ಯಾರಿಗೂ ಹೇಳಲಾಗದ ವಿಷಯಗಳನ್ನು ಗೆಳೆಯರೊಂದಿಗೆ ಹಂಚಿಕೊಳ್ಳುತ್ತದೆ. ಹಾಡು–ಕುಣಿತ–ನಗೆ–ಗೆಲವುಗಳಲ್ಲೆಲ್ಲ ಗೆಳೆಯರಿರಬೇಕು. ಹಳ್ಳಿಗಳಲ್ಲಿ ಆಡಲು–ಹಾಡಲು ಗೆಳೆಯರನ್ನು ಕರೆಯುವುದು ರೂಢಿ. ಆ ದೃಶ್ಯವೊಂದು ಪ್ರೇಮದ ಹಾಡಿನಲ್ಲಿದೆ.

**ಕೋಲನಾಡುಣು ಬಾರ**
**ಸಂಗಾಟ ದನಿದೋರ**
............................................
**ಒಂದಾಗಿ ಸರದಗದ**
**ಚಂದಾಗಿ ಹಾಡಿದರ**
**ಇಂದಿಽಗಿ ನಮ ಜೀವ ಸಾರ್ಥಕ । ಮತ್ತ**
**ಮುಂದಿನ ದಿನ ಚಿಂತಿ ಯಾತಽಕ.** [೬೧]

---

೬೦. ಪ್ರೀತಿ : ಗಾಲಿ ಉಳ್ಳತ್ಯೆತಿ : ಪುಟ–೧೯

೬೧. ಕೊಲಽನಾಡುನು ಬಾರ : ಹಾಡುಣು ಬಾರಽ ಪ್ರೇಮದ ಹಾಡಾ : ಪುಟ–೩೧

ಗೆಳೆತನ ಮುಗಿಲುದ್ದ ಪ್ರೀತಿ ಹೆಣೆಯುತ್ತದೆ. ಮನಸ್ಸು ಮಲ್ಲಿಗೆ ಮಾಡಿ ಕುಣಿಯುತ್ತದೆ. ಜಾತಿ ಗೋಡೆ ಕೆಡವಿ ಹೃದಯ–ಹೃದಯಗಳನ್ನು ಬೆಸೆಯುತ್ತದೆ. ದನಿ ದನಿ ಬೆರೆಸುತ್ತದೆ.

**ಅರಳ ಮಲ್ಲಿಗೆ ಮುಡದ**
**ಬಣ್ಣದ ಕೋಲ್ಹಿಡದ**
**ಬೆಳದಿಂಗಳಿಗಿ ಬಣ್ಣ ಬೆರಸೂಣು । ನಮ**
**ಚಂದ್ರಾಮಗ ಚಲುವ ಕಲಸೂಣು.** [೬೨]

ಚಂದ್ರನಿಗೆ ಚಲುವಿಕೆಯ ಪಾಠ ಬೋಧಿಸುವ ಕೋಲಾಟದ ಗೆಳತಿಯರ ಹಂಬಲ ಕಚಗುಳಿಯಿಡುತ್ತದೆ. ಹಾಲು ಬೆಳದಿಂಗಳ ಅಂಗಳದಲ್ಲಿ ಕೋಲಾಟ ಆಡುತ್ತಿರುವ ಮಡದಿಯನ್ನು ಪುರುಷ ಸರಸಕ್ಕೆ ಕರೆಯುತ್ತಿದ್ದಾನೆ. ಅವಳಿಗೋ ಗೆಳತಿಯರೊಂದಿಗೆ ಎದೆಯೊಳಗಿನ ಕಥೆ ಹಂಚಿಕೊಳ್ಳಬೇಕಿದೆ.

**ಕಥೆ ಹೇಳ ಕೋಲಿನಗೂಡ**
**ಎದಿಯಾಗ ಉಳಸುದು ಬ್ಯಾಡ**
**ಹೇಳಿದರ ಎದಿ ಹಗರ ಇಂದಿಽಗಿ । ಹೊಳ್ಳಿ**
**ಉಳ್ಳಸ ತುಂಬಿಽರು ಬಿಂದಿಽಗಿ.** [೬೩]

ಜೀವದ ಗೆಳೆಯರಿಬ್ಬರ ಗೆಳೆತನಕ್ಕೆ ಕುತ್ತು ತರುವ ಹುಡುಗಿಯೊಬ್ಬಳು 'ಹೊಳಿಸಾಲ ಬಳ್ಳಿ'ಯಲ್ಲಿದ್ದಾಳೆ. ಅವಳು ಇಬ್ಬರಿಗೂ ಹುಬ್ಬು ಹಾರಿಸಿ, ಅವರಿಬ್ಬರಲ್ಲಿ ಜಗಳ ಹಚ್ಚುವಳು. ಜೀವದ ಗೆಳೆಯರು ಕಾಳ ಹುಡುಗಿಯ ಮಾಯೆಯಿಂದ ಅಗಲುವ ಸಂದರ್ಭ ಎದುರಾದಾಗ ತಡೆದುಕೊಳ್ಳಲಾಗದ ತಳಮಳ.

**ಊಟಕ್ಕೆ ಹ್ವಾದಾಗೊಮ್ಮೆ**
**ತಾಯಿ ಕೇಳತಾಳ**
**ರಾಮನ ಕರಿ ಎಲ್ಲಿ ಬಿಟ್ಟ ಕೋಟ್ಟೆ**
**ಎಡಿಯಾನ ಕೂಳೆಲ್ಲ**
**ಬೇವಿನ ಕಾಯಾಗಿ**
**ಕೈ ತೊಳದ ಬಿಡತಽನೊ ಅರಹೊಟ್ಟೆ.** [೬೪]

ಗೆಳೆಯ–ಗೆಳತಿಯರ ಸಮಾಗಮ ಪ್ರೀತಿ; ಗೆಳೆಯ–ಗೆಳೆಯ ಅಥವಾ ಗೆಳತಿ–ಗೆಳತಿಯರ ಬೆರಕೆ ಸಖ್ಯ.

---

೬೨. ಅದೇ. ಪುಟ–೫೨
೬೩. ಅದೇ.
೬೪. ಅಚಿ ಮನಿ ಪೌ ಇಚಿ ಮನಿ ಪೌ : ಹೊಳಿಸಾಲ ಬಳ್ಳಿ : ಪುಟ–೪೨

## ೩.೫. ಶಿಶುಗೀತೆಗಳು :

ಶಿಶುಗೀತೆಗಳು ಇಟ್ಟಣ್ಣವರ ಪ್ರೇಮ ಕಾವ್ಯದ ನಾದ ಸಂಗೀತ. ಅವರ ಒಟ್ಟು ಕಾವ್ಯದಲ್ಲಿ ಪ್ರಾಸ ಸಹಜವಾಗಿ ನಾದಮಯಗೊಳ್ಳುತ್ತದೆ. ಶಿಶುಗೀತೆಗಳ ಪ್ರಮುಖ ಲಕ್ಷಣ ಪ್ರಾಸದ ನಾದ ವಿಶಿಷ್ಟತೆ. ಪ್ರೇಮ, ದಾಂಪತ್ಯ, ಕೌಟುಂಬಿಕ, ಸಖ್ಯ ಗೀತೆಗಳನ್ನು ರಚಿಸಿದ ಕವಿ ಇಟ್ಟಣ್ಣವರ ಶಿಶು ಪ್ರಾಸಗಳ ರಚನೆಗೆ ಕೈ ಹಾಕಿದುದು ಅಚ್ಚರಿ ಎನಿಸದು. ೧೯೯೫ ರಲ್ಲಿ ಅವರ 'ನೂರುಶಿಶುಗೀತೆಗಳು' ಪ್ರಕಟಗೊಂಡವು. ಶೀರ್ಷಿಕೆ ಹೇಳುವಂತೆ ಇದರಲ್ಲಿ ೧೦೦ ಶಿಶು ಪ್ರಾಸಗಳಿವೆ. ಅವುಗಳನ್ನು ಈ ಕೆಳಗಿನಂತೆ ಅಧ್ಯಯನದ ವೈಧಾನಿಕತೆಗೆ ಹೊಂದಿಸಬಹುದು.

೩.೫.೧. ವಸ್ತು ವಿಶಿಷ್ಟತೆ

೩.೫.೨. ಭಾವ ವಿಶೇಷತೆ

೩.೫.೩. ಪ್ರಾಸ ವೈವಿಧ್ಯತೆ

೩.೫.೪. ಆಶಯ ವಿಶ್ಲೇಷಣೆ

### ೩.೫.೧. ವಸ್ತು ವಿಶಿಷ್ಟತೆ :

ಶಿಶು ಸಾಹಿತ್ಯ ರಚನೆ ಕಷ್ಟಕರವಾದುದು. ಏಕೆಂದರೆ ಶಾಲಾ ಪೂರ್ವ ಮುಗ್ಧ ಮನಸ್ಸಿನ ಮಕ್ಕಳ ಮನೋಸ್ಥಿತಿಯ ಮಿಡಿತ/ತುಡಿತಗಳನ್ನು ಅರಿತುಕೊಂಡು ಗೀತೆಗಳನ್ನು ರಚನೆ ಮಾಡುವುದು ಪ್ರಯಾಸಕರ. ಆದರೆ ಇಟ್ಟಣ್ಣವರ ಆ ನಿಟ್ಟಿನಲ್ಲಿ ಇಲ್ಲಿ ಕವನಗಳನ್ನು ಹೆಣೆದಿದ್ದಾರೆ. ಮಗುವಿನ ಮನಸ್ಸು ಕೋಮಲವಾದುದು. ಒಂದರ್ಥದಲ್ಲಿ ಹಸಿ ಗೋಡೆಯಿದ್ದಂತೆ. ಅಂದರೆ ಹೇಳಿದ್ದನ್ನು ತಟ್ಟನೆ ಗ್ರಹಿಸುವ ಸಾಮರ್ಥ್ಯ ಮಗುವಿನದು. ಹೀಗಾಗಿ ಮನೆಯ ಅಕ್ಕರೆಯ ಅಮ್ಮನಿಂದ ಹಿಡಿದು ಕೈಗೆಟುಕದ ಕಾಲದವರೆಗಿನ ವಸ್ತುಗಳು ಇಲ್ಲಿ ಗೀತೆಗಳಾದದ್ದು ವಿಸ್ಮಯವನ್ನುಂಟು ಮಾಡುತ್ತದೆ.

ಸಾಂಪ್ರದಾಯ ಬಿಂಬಿಸುವ ಹಬ್ಬ ಹರಿದಿನ, ಮದುವೆ, ಜಾತಿ, ನಿಸರ್ಗದ ರಮ್ಯತೆ, ಮುದ್ದಿನ ಪ್ರಾಣಿಗಳು, ಸಂಬಂಧಗಳು, ಸಮಾಜ, ಕಾಲ, ದೇಶ ಆಟ–ಹೀಗೆ ಹಲವು ವಿಷಯಗಳೆಲ್ಲವೂ ಇಲ್ಲಿ ಕಾವ್ಯದ ವಸ್ತುಗಳಾಗಿವೆ.

ತಾಯಿ–ಮಗುವಿನ ಸಂಬಂಧ ಅವಿನಾಭಾವವಾದುದು.

**ಹಸಿರು ಸೀರೆ ಉಟ್ಟು**
**ಹಳದಿ ಬ್ಲೌಜು ತೊಟ್ಟು**
**ಕೆಂಪು ಕುಂಕುಮ ಬೊಟ್ಟು**
**ಕರಿಯ ಕಾಡಿಗೆ ಇಟ್ಟು**
**ಬಿಳಿಯ ಮಲ್ಲಿಗೆ ಮುಡಿದು**
**ಗುಡಿಯ ದಾರಿ ಹಿಡಿದು**
**ಮೆಲ್ಲಗೆ ಹೊರಟಳು ಅಮ್ಮ**
**ನನ್ನ ಮುದ್ದು ಅಮ್ಮ.** [೬೫]

೬೫. ಅಮ್ಮನ ಚಂದ : ನೂರು ಶಿಶು ಗೀತೆಗಳು : ಪುಟ–೩

ಇಲ್ಲಿ ಮಗು ತನ್ನ ಮುಗ್ಧ ಮನಸ್ಸಿನ ಮೂಲಕ ಗ್ರಹಿಸುವ ಸೌಂದರ್ಯವೇ ಗೀತೆಯಾಗಿ ಮೈದಳೆದಿದೆ. ಬಾಲ್ಯದಲ್ಲಿ ಮಗುವಿನ ಒಡನಾಟ ಇರುವುದೇ ಅಮ್ಮ-ಅಪ್ಪ, ಅಜ್ಜ, ಅಜ್ಜಿ, ಬಂಧು, ಬಳಗ ಹಾಗೂ ಗೆಳೆಯರೊಂದಿಗೆ. ಆದ್ದರಿಂದ ಇವು ಶಿಶುಗೀತೆಗಳಿಗೆ ಮೊದಲ ವಸ್ತುಗಳು. ಹೀಗಾಗಿ ಇಲ್ಲಿ ಬರುವ ಎಲ್ಲ ಪ್ರಾಸಗಳಲ್ಲಿ ಈ ಬಾಂಧವ್ಯಗಳ ಬೆಸುಗೆ ಇದೆ.

**ಆಡಿ ಮನೆಗೆ ಬಂದೆ**
**ಮಂಚದಲ್ಲಿ ತಂದೆ** [೬೬]

ಮನುಷ್ಯ ಸಂಘಜೀವಿ. ಇಲ್ಲಿ ಕವಿ ಅವಿಭಕ್ತ ಕುಟುಂಬದ ಮೂಲಕ ಮಗುವಿಗೆ ಸಂಬಂಧಗಳನ್ನು ಕಟ್ಟಿಕೊಟ್ಟಿದ್ದಾರೆ.

### ೩.೫.೨. ಭಾವ ವಿಶೇಷತೆ :

ಕವಿ ಇಟ್ಟಣ್ಣವರ ಶಿಶು ಗೀತೆಗಳ ಭಾವ ಕೋಮಲವಾದುದು. ಈ ಕವನಗಳು ಮಕ್ಕಳಿಗೆ ಮುಟ್ಟಬೇಕೆನ್ನುವ ಇಂಗಿತ. ಕವಿಗೆ ಮಕ್ಕಳ ಮನೋ ಇಂಗಿತ ಗೊತ್ತು. ಈ ಗೀತೆಗಳು ಮಕ್ಕಳ ಮನಸ್ಸು ಮುಟ್ಟುತ್ತವೆ.

ತಾನಾಡಿ ಬೆಳೆದ ಊರು, ಬೆಳಕು, ನೀರು, ಗಾಳಿ, ಭೂಮಿ, ಬೆಟ್ಟ, ಮಳೆ, ಸೂರ್ಯ, ಚಂದ್ರ, ನಕ್ಷತ್ರ-ಆಟ-ನೋಟ-ಪಾಠ ಎಲ್ಲವೂ ಮಕ್ಕಳನ್ನು ಸೆಳೆಯುತ್ತವೆ. ಮಕ್ಕಳ ಭಾವನೆಗೆ ಮುಟ್ಟುವಂತೆ ಅವರದೇ ಭಾಷೆಯಲ್ಲಿ ಅವುಗಳ ಮಹತ್ವ ಹೇಳುವ ರೀತಿ ಸುಂದರವಾಗಿದೆ.

**ನೀರು ಬೇಕು ನೀರು**
**ಬೆಳೆಯಲು ಪೈರು**

..........................................

**ಹಂಡೆ-ಗಿಂಡಿ ತುಂಬೋಣ**
**ಬೇಕಾದಷ್ಟೇ ಬಳಸೋಣ.** [೬೭]

ಮಕ್ಕಳಿಗೆ ಪ್ರಿಯವಾದದ್ದು ಆಟ, ಪ್ರಾಣಿಗಳ ಒಡನಾಟ ಅದಕ್ಕೆ ಕವಿ ಇಲ್ಲಿ ಪ್ರಾಣಿಗಳ ಜೊತೆ ಮಕ್ಕಳ ಅಕ್ಕರೆಯ ಸ್ನೇಹದ ಸಿಂಚನ ಸಿಡಿಸಿದ್ದಾರೆ.

**ಮ್ಯಾಂವ ಮ್ಯಾಂವ ಬೆಕ್ಕಣ್ಣ**
**ನನ್ನ ಹತ್ತಿರ ಬಾರಣ್ಣ**
**ಹಾಲು ಅನ್ನ ಉಣ್ಣಣ್ಣ**
**ಕೆಟ್ಟ ಇಲಿಗಳ ಓಡಿಸಣ್ಣ**

---

೬೬. ಸಂಬಂಧಿಕರು : ನೂರು ಶಿಶು ಗೀತೆಗಳು : ಪುಟ-೭
೬೭. ನೀರು : ನುರು ಶಿಶುಗೀತೆಗಳು : ಪುಟ-೧೦

ಮನೆಯ ತುಂಬ ಸುಳಿಯಣ್ಣ
ನನ್ನ ಗೂಡ ಆಡಣ್ಣ. [೧೮]

ಬೆಕ್ಕು ಮಕ್ಕಳ ಮುದ್ದಿನ ಪ್ರಾಣಿ. ಹೀಗಾಗಿ ಕವಿ ಇಲ್ಲಿ ಬೆಕ್ಕಿನ ಚಿತ್ರ ಮಗುವಿನ ಮನ ತಟ್ಟುವಂತೆ ರಚಿಸಿದ್ದಾರೆ.

### ೩.೫.೩. ಪ್ರಾಸ ವೈವಿಧ್ಯತೆ :

ಇಲ್ಲಿಯ ಶಿಶುಗೀತೆಗಳು ಪ್ರಾಸದಿಂದ ಮನಕ್ಕೆ ಮುಟ್ಟುತ್ತವೆ. ಅಕ್ಷರಗಳ ಪುನರುಕ್ತಿಯ ನಿನಾದ ಮಕ್ಕಳನ್ನು ಸೆಳೆಯುವಲ್ಲಿ ಯಶಸ್ವಿಯಾಗಿದೆ.

ಹಾಡಿದರೆ ಅಮ್ಮ
ಮಲಗುವವನು ತಮ್ಮ
ಹಾಡು ಎಷ್ಟು ಸುಂದರಾ
ಹುಣ್ಣಿಮೆಯ ಚಂದಿರಾ
ಹಾಡು ಕೇಳಿ ಕುಣಿವೆನು
ಹೊಟ್ಟೆ ತುಂಬ ಉಣುವೆನು [೧೯]

### ೩.೫.೪. ಆಶಯ ವಿಶ್ಲೇಷಣೆ :

ಇಲ್ಲಿನ ಒಟ್ಟು ಪ್ರಾಸಗಳ ಆಶಯ ಮಕ್ಕಳ ಮನರಂಜಿಸುವುದು. ನಾದಮಯ ಪ್ರಾಸ, ಸರಳಪದ, ವಸ್ತು ವೈವಿಧ್ಯತೆಗಳಿಂದ ಮಕ್ಕಳ ಮನ ಉಲ್ಲಸಿತಗೊಳಿಸಿ ಅವರನ್ನು ಕೂತೂಹಲಿಯಾಗಿಸುವುದು.

ನಿಸರ್ಗದ ಪ್ರತಿಯೊಂದು ವಸ್ತುವೂ ಮಗುವಿಗೆ ವಿಸ್ಮಯವೇ. ಸೂರ್ಯ–ಚಂದ್ರ–ನದಿ–ಗುಡ್ಡ–ಬೆಟ್ಟ–ಪ್ರಾಣಿ–ಪಕ್ಷಿ–ಆಟ ಇಂಥ ವಿಷಯಗಳಲ್ಲಿಯೇ ಮಗುವಿಗೆ ಕೌತುಕವಿರುತ್ತದೆ.

ಕಪ್ಪಗಿರುವುದು ಕಾಗೆ
ಅಂಜಿಕೆ ಬರುವುದು ಗೂಗೆ
ನವಿಲಗರಿಯ ಬಣ್ಣ
ಅದರ ತುಂಬ ಕಣ್ಣ
ಹಕ್ಕಿ ಹಾರಿಸು ಹಾಹೂ
ಕೋಗಿಲೆ ಕೂಗಿತು ಕುಹೂ ಕುಹೂ. [೨೦]

---

೧೮. ಬೆಕ್ಕು : ನೂರು ಶಿಶುಗೀತೆಗಳು : ಪುಟ–೨೬
೧೯. ಅಮ್ಮನ ಹಾಡು : ನೂರು ಶಿಶು ಗೀತೆಗಳು : ಪುಟ–೦೪
೨೦. ಪಕ್ಷಿಪಟ : ನುರು ಶಿಶುಗೀತೆಗಳು : ಪುಟ–೩೨

ಇಂಥ ಗೀತೆಗಳಲ್ಲಿ ಪ್ರಾಣಿ-ಪಕ್ಷಿ ಕುರಿತು ಹೇಳುವುದರ ಜೊತೆ ಅವುಗಳ ಸ್ವಭಾವವನ್ನು ಮಗುವಿಗೆ ಹೇಳುವ ರೀತಿ ಚನ್ನಾಗಿದೆ.

### ೩.೩. ನಿಸರ್ಗ ಕವನಗಳು :

ಮೂಡುಽ ಮುಳುಗು ಸೂರ್ಯನ ಬೆಳಕಾ
ಕತ್ತಲದಾಗಿನ ಮಿಂಚಿನ ಥಳಕಾ
ಹಕ್ಕಿ ಪಕ್ಕಿಯ ಚಿಲಿಪಿಲಿ ಇಂಪಾ
ಹಳ್ಳ ಕೊಳ್ಳದ ಜುಳು ಜುಳು ತಂಪಾ
ಗುಡ್ಡದ ವಾರ್‍ಯಾನ ಹಚ್ಚಾನ ಹಸರಾ
ಚಪ್ಪರ ಮ್ಯಾಗಿನ ಮಲ್ಲಿಗೆ ಮುಸರಾ
.......................... ಮನಕ ಮುಟ್ಟತೈತಿ
ಆಗ ಕವಿತಾ ಹುಟ್ಟತೈತಿ. ೭೧

ನಿಸರ್ಗ ಸೆಳೆತದ ಮೂಸೆಯಲ್ಲಿಯೇ ಮೊದಲ ಕವಿತೆ ಮೂಡುತ್ತದೆ. ಸೂರ್ಯನ ಮೂಡು-ಮುಳುಗು, ರಾತ್ರಿಯ ನಕ್ಷತ್ರಗಳು, ಹಕ್ಕಿಯ ಕಲರವ, ಹೂವಿನ ಅಂದ..... ಮುಂತಾದವು ಕವಿತೆಗೆ ಕಾವು ಕೊಡುತ್ತವೆ. ನಿಸರ್ಗದ ಕುತೂಹಲವೇ ಕಾವ್ಯಕ್ಕೆ ಪ್ರೇರಣೆ. ಕುತೂಹಲಿಯಲ್ಲದವ ಕವಿಯಾಗಲಾರ. ಕವಿತೆಯ ಬೀಜಗಳಿರುವುದೇ ಮಗುವಿನ ಕಣ್ಣಿನಲ್ಲಿ. ಆದ್ದರಿಂದ ನಿಸರ್ಗ ಕವನ ರಚಿಸದ ಕವಿಗಳೇ ಇಲ್ಲ.

ಡಾ॥ ಇಟ್ಟಣ್ಣವರ ಕಾವ್ಯದ ದೀಪ್ತಿಯೇ ನಿಸರ್ಗ. ಅಲ್ಲಿಯ ಬೆಳಕೇ ಈ ಕಾವ್ಯ ದೀಪ್ತಿಯ ತೈಲ.

ಕರುಣತೋರಿ ಆ ಅರುಣ ದಿನಂಪ್ರತಿ ರಥಾ ಹೂಡತಾನೊ
ಇರುಳ ಸರಿಸಿ ಹೂ ಬಿಸಿಲ ಅರಳಿಸಿ ಸೂರ್ಯ ಮೂಡತಾನೊ
ಲಕ್ಷ ಲಕ್ಷ ನಕ್ಷತ್ರ ಲೋಕ ಆಕಾಶ ತುಂಬ ಈಸಿ
ಚಂದ್ರ ಬೆಳಕ ನೆಲ್ಲಕೆಲ್ಲ ಜಳಕ ಸುತ್ತೆಲ್ಲಸೂಸಿ ಸೂಸಿ." ೭೨

ಬೆಳಕು ಬಿತ್ತಿ, ಬೆಳಕು ಬೆಳೆದು, ಬೆಳಕಿನ್ಹಾಡು ಹೊಸೆದು, ಹಾಡಿದ್ದು ಇಟ್ಟಣ್ಣವರ ಕಾವ್ಯ ಸಾಧನೆ. ಅವರ ಕಾವ್ಯದಲ್ಲಿ ಹರಿಯುವ ಹೊಳೆ ಬೆಳಕಿನ ತೊರೆ. ಪ್ರೀತಿ ಆ ಬೆಳಕಿನ ಒಂದು ಸೆಳಕು. ನೀರು ಜೀವ : ಬೆಳಕು ಜೀವನ ; ಮಣ್ಣು ಬದುಕು. ನೀರೋಡಲಲ್ಲಿ ಬೆಳಕಿದೆ; ಮಣ್ಣಿನೊಡಲಲ್ಲಿ ಬದುಕಿದೆ. ಬೆಳಕಿದ್ದರೆ ನೀರಿನ ಬೆಲೆ ತಿಳಿಯುತ್ತದೆ. ಇವರ ಕಾವ್ಯದಲ್ಲಿ ನೀರು ಮಣ್ಣು-ಬೆಳಕುಗಳ ಗಮ್ಮತ್ತಿದೆ. ಮಾನವನ ದುರಾಸೆ ನೀರು-ಮಣ್ಣು-ಬೆಳಕುಗಳನ್ನು ಮಲೀನಗೊಳಿಸುತ್ತಿರುವ ಕಳವಳವಿದೆ.

ಬೆಳಕು ಬಿತ್ತಿ, ಬೆಳಕು ಬೆಳೆದು, ಬೆಳಕಿನ್ಹಾಡು ಹೊಸೆದು, ಹಾಡಿದ್ದು ಇಟ್ಟಣ್ಣವರ ಕಾವ್ಯ ಸಾಧನೆ. ಅವರ ಕಾವ್ಯದಲ್ಲಿ ಹರಿಯುವ ಹೊಳೆ ಬೆಳಕಿನ ತೊರೆ. ಪ್ರೀತಿ ಆ ಬೆಳಕಿನ ಒಂದು ಸೆಳಕು.

---

೭೧. ಕವಿತಾ ಹುಟ್ಟತೈತಿ : ಹೊತ್ತು ಮೂಡುವ ಸಮಯ : ಪುಟ-೧೨

೭೨. ಬೆಳಕು : ಹೊತ್ತು ಮೂಡುವ ಸಮಯ : ಪುಟ-೭

ನೀರು ಜೀವ : ಬೆಳಕು ಜೀವನ ; ಮಣ್ಣು ಬದುಕು. ನೀರೋಡಲಲ್ಲಿ ಬೆಳಕಿದೆ; ಮಣ್ಣಿನೊಡಲಲ್ಲಿ ಬದುಕಿದೆ. ಬೆಳಕಿದ್ದರೆ ನೀರಿನ ಬೆಲೆ ತಿಳಿಯುತ್ತದೆ. ಇವರ ಕಾವ್ಯದಲ್ಲಿ ನೀರು ಮಣ್ಣು-ಬೆಳಕುಗಳ ಗಮ್ಮತ್ತಿದೆ. ಮಾನವನ ದುರಾಸೆ ನೀರು-ಮಣ್ಣು-ಬೆಳಕುಗಳನ್ನು ಮಲೀನಗೊಳಿಸುತ್ತಿರುವ ಕಳವಳವಿದೆ.

'ಹೊಳಿಸಾಲ ಬಳ್ಳಿ'ಯ ಮಳೆರಾಯನಲ್ಲಿ ಬೇಂದ್ರೆಯವರ ಶ್ರಾವಣದ ಸೊಬಗಿದೆ. ರೈತರಿಗೆ ಮಳೆ ನೀರಿನ ತೊರೆಯಲ್ಲ ; ಜಾತಿ ಮುತ್ತುಗಳ ತೊರೆ. ಇಳೆಗೆ ಒಬ್ಬನೇ ರಾಯ, ಅವನೇ ಮಳೆರಾಯ. ಅವನೇ ದೊರೆ ; ಅವನೇ ದೇವರು.

ಶ್ರಾವಣದ ಮಳೆಯ ವೈಭವವೇ ಅವರ್ಣನೀಯ. ನೆಲವೆಲ್ಲ ಹಸಿ, ಮನವೆಲ್ಲ ಹಸಿರು, ಕೊಸರುಗೊಂಡ ಜಗತ್ತು ಉತ್ಸಾಹ ಜೋಕಾಲಿಯಾಗಿ ಮರಮರಕ್ಕೂ ಜೀಕುವುದು.

**ಹನಿ ಮುತ್ತ ಆಗಿ, ಆ ಮುತ್ತ ಜೀಕತಾವ**
**ಸರತಿಮ್ಯಾಗ ಜೋಕಾಲಿ**

..............................................

**ಮನಿ ಮನಿಯ ಮುಂದ ಹಿರಿ ಹೊಳೆಯ ಚಂದ**
**ಹರದಾಡತಾವ ದೋಣಿ**
**ಅಳ್ಳ ಉಂಡಿ ಭರಪೂರ ತುಂಬಿ**
**ಸಾಗ್ಯಾವ ಓಣಿ ಓಣಿ.** [೭೩]

ಶ್ರಮ ಸಂಸ್ಕೃತಿಯ ಈ ಕವಿಗೆ ಮಳೆ ಎಂದರೆ ಸಡಗರವೇ ಸಡಗರ. ಎಷ್ಟು ಸುರಿದರೂ ಸಾಕಾಗದು. ಮಣ್ಣಿನೊಂದಿಗೆ ಬಾಳು ಬೆಸೆದ ನಾಡ ಮಕ್ಕಳಿಗೆ ಭೂಮಿಯೇ ತಾಯಿ ; ಮಳೆಯೇ ತಂದೆ. ಅದಕ್ಕೆ ಕವಿ ಮಳೆಯೊಂದಿಗೆ ಸಲಿಗೆಯಲ್ಲಿ ಹಾಡುವುದು.

**ಸುತ್ತಾಡಿ ಸುರಿಯೋ ಅರದೋಟ ಬ್ಯಾಡ**
**ಬಂದಾವ ಬೇಗಳಿನ್ನs**
**ತೊಳದ್ಹಾಂಗ ಆದೀತು ನಿನ್ನ ಕೆಲಸ**
**ಹೊಳಿಯಾಗ ಹುಣಸಿ ಹಣ್ಣ.** [೭೪]

ಶ್ರಾವಣದ ಸೋನೆ ಇದಾದರೆ ಮುಂಗಾರು ಮಳೆಯ ಸಂಭ್ರಮವೇ ಬೇರೆ. ಮುಂಗಾರು ಮುಖ್ಯಮಂತ್ರಿಯ ಕಾರು. ಮುಂದೆ ಹತ್ತೆಂಟು ಕಾರು : ಹಿಂದೆ ಹತ್ತೆಂಟು ಕಾರು. ಪೋಲೀಸ ಸೈರನ್ನಿನ ಗದ್ದಲದಲ್ಲಿ ಮುಖ್ಯಮಂತ್ರಿಯ ಕಾರು, ಹೋದದ್ದೇ ತಿಳಿಯುವುದಿಲ್ಲ. ಮೂಂಗಾರಿನಲ್ಲಿ ಬಿರುಗಾಳಿಯದೇ ಗದ್ದಲ.

**ಹಿಡಿರಿ : ಹಿಡಿರಿ !! ಮದದಾನಿ ಹಾಂಗ**
**ಬಿರುಗಾಳಿ ಹಾಂಗ ಗೂಳಿ**

---

೭೩. ಮಳಿರಾಯ ಬಂದ : ಹೊಳಿಸಾಲ ಬಳ್ಳಿ : ಪುಟ-೩೧
೭೪. ಅದೇ. ಪುಟ-೩೨

ಡುರಕಿ ಹೊಡೆದ ಬೈಲೊಳಗ ಬಂದಿತೊ
ಸುಕದ ಗಾಳಿ ಸೀಳಿ. [೭೫]

ಮುಂಗಾರು ಮೊದಲ ಮಳೆ, ಗಾಳಿ ಮೋಡಗಳ ಯುದ್ಧ. ಗಾಳಿ ಮೋಡಗಿರಿ ಸೀಳಲು ನುಗ್ಗುತ್ತದೆ. ಮೋಡ ಅದರ ಕೈಗೆ ಸಿಗದೆ ಓಡಿ ಹೋಗುತ್ತದೆ. ಗಿರಿಯಂತೆ ಬಂದ ಮೋಡ ಕರಗದೆ, ಮಳೆ ಸುರಿಸದೇ ಹಾರಿ ಹೋಗುವುದು.

ಮಳೀ ಹನಿ ಮುತ್ತಾಗಲಿಲ್ಲ
ರಣಬಿಸಿಲ ನುಂಗಿದ್ಹಾಂಗ :
ಹಾಂ ಅನೂದರಾಗ ಹಾರಿ ಹ್ವಾದಗಿರಿ
ಕೈಗಿ ಸಿಗದ ಹಾಂಗ
ಸಂಜಿ ಹೊತ್ತ ಜರ ಜರದ ಬಿತ್ತ
ತುಂಬಿತ್ತ ರಕ್ತ ಕೊಳಗ :
ಅತ್ತ ಅತ್ತ ಹಾರ್‍ಯಾಡತಿತ್ತ
ನೂರೊಂದ ಹಕ್ಕಿ ಬಳಗ. [೭೬]

ನಗರೀಕರಣ ನಮ್ಮ ನಿಸರ್ಗ – ಬದುಕು ಮತ್ತು ಸಂಸ್ಕೃತಿಯನ್ನು ವಿರೂಪಗೊಳಿಸುತ್ತಿರುವ ಕೊರಗು ಇವರ ಕವಿತೆಗಳಲ್ಲಿ ಮತ್ತೆ ಮತ್ತೆ ಕಾಣುತ್ತದೆ. 'ಹೊತ್ತು ಮೂಡುವ ಸಮಯ' ಸಂಕಲನದ 'ಸಸ್ಯ ಶಾಮಲೆ' ಇದಕ್ಕೆ ತಕ್ಕ ಉದಾಹರಣೆ. ಹಸಿರು ತಾಯಿಯ ತೊಡೆಯ ಮೇಲೆ ಹಸಿದು ಕುಳಿತಿದೆ ಯಂತ್ರಕೂಸು. ಯಂತ್ರ ರಾಕ್ಷಸ ಸಂತಾನ. ಮೊದಲು ಹಾಲು ಕುಡಿದು, ಅನಂತರ ರಕ್ತ ಹೀರುವುದು. ತಾಯಿ ಸತ್ತರೂ ಅದರ ಹಸಿವು ಹಿಂಗದು.

ವರ್ತಮಾನದ ದಾಹಕೆಲ್ಲಿ
ಇತಿಮಿತಿಯುಂಟು ?
ಕಂಡ ಕಂಡದ್ದೆಲ್ಲ ಸವರುತಿಹರು
ಹಳದಿ ಲೋಹಕ್ಕೆ ಮತ್ತೆ
ಹೊಳೆವ ಕಲ್ಲಿಗೆ ಕೂಡ
ನೆಲದಾಯಿ ಗಣಿಗರ್ಭ ಸೀಳುತಿಹರು. [೭೭]

ಮಲಿನಗೊಂಡ ಮಾನವ ಮನಸ್ಸು ನಿಸರ್ಗದ ಮಲೀನತೆಗೆ ಜಿಡ್ಡು ಕಟ್ಟುತ್ತಿರುವ ದುರಂತ ಸಸ್ಯ ಶಾಮಲೆಯಲ್ಲಿ ಪರಿಣಾಮಕಾರಿಯಾಗಿ ಪಡೆಮೂಡಿದೆ. ನವಿಲು ಕಣ್ಣಿನ ಹುಣ್ಣುಗಳನ್ನು ತೋರಿಸುವ ಈ ಕವಿಯು ಪ್ರೇಮದ ಅವಸಾನವನ್ನು ಸೂಚಿಸುವನು.

---

೭೫. ಮಳೆ ಹನಿ ಮುತ್ತಾಗಲಿಲ್ಲ : ಹೊಳಿಸಾಲ ಬಳ್ಳಿ : ಪುಟ–೩೨
೭೬. ಅದೇ.
೭೭. ಸಸ್ಯ ಶಾಮಲೆ : ಹೊತ್ತು ಮೂಡುವ ಸಮಯ : ಪುಟ–೪೫

ಸೂಸುಗಾಲಿಗೆ ತೊನೆವ
ಹಸಿರು ಮುರಿಯುವ ಮರವು
ಹಬ್ಬಿರುವ ಹೂಬಳ್ಳಿ ಕಾಯಿ ಹಣ್ಣು
ಕಪ್ಪು ಹೊಗೆ ಆವರಿಸಿ
ಕಾಣದಂತಾಗಿಹನು
ಹುಣ್ಣು ಹುಣ್ಣಾಗಿಹನು ನವಿಲ ಕಣ್ಣು.[೭೯]

ಇಟ್ಟಣ್ಣವರಲ್ಲಿ ಮುಳುಗಡೆಯ ಭೀತಿಯಿದೆ. ಅವರು ಆಲಮಟ್ಟಿ ಆಣೆಕಟ್ಟಿನ ಹಿನ್ನೀರಿನಲ್ಲಿ ಬಾಗಲಕೋಟೆ ಮುಳುಗಿದುದನ್ನು ಕಣ್ಣಾರೆ ಕಂಡವರು. ಇಳಕಲ್ಲಿನ ಭೂಗರ್ಭ ಸೀಳುವ ಯಂತ್ರಗಳ ಕೊರೆತ ಕೇಳಿದವರು. ಗಣಿಯ ಧೂಳಿನ ವಿಷ ಮೂಸಿದವರು. ಮನಸ್ಸಿನ ಮೇಲಿನ ಈ ಆಘಾತಗಳು ಅವರನ್ನು ಭಾವುಕ ನೆಲೆಯಿಂದ ಎತ್ತಿ ವೈಚಾರಿಕ ನೆಲೆಯಲ್ಲಿ ನಿಲ್ಲಿಸಿವೆ. ಅವರು ನಿಸರ್ಗ ಸೌಂದರ್ಯವನ್ನು ವೈಭವೀಕರಿಸದೆ ಅದರ ಅಪಾಯಗಳ ಕುರಿತು ಚಿಂತಿಸುತ್ತಾರೆ. ಮರಮರಗಳ ಎದೆಯ ಮೇಲಾಡುವ ಕೊಡಲಿಗಳಿಗೆ ಕನಲುತ್ತಾರೆ. ಬೇವಿಲ್ಲದೆ ಬಂದ ಯುಗಾದಿಗೆ ಸಿಡುಕುತ್ತಾರೆ. ಪ್ರೀತಿಯಿಲ್ಲದ ಮನಸ್ಸುಗಳೆಂದರೆ ಇವರಿಗೆ ಅಲರ್ಜಿ. ಇಟ್ಟಣ್ಣವರ ಕಾವ್ಯ ಒಲವಿನ ಸೆಲೆ ; ಪ್ರೀತಿಯ ಹೊಳೆ.

---

೭೯. ಅದೇ.

# ಅಧ್ಯಾಯ – ೪

## ಇಟ್ಟಣ್ಣವರ ಕಾವ್ಯ ವಿಶ್ಲೇಷಣೆ–೨ : ಸಾಂಸ್ಥಿಕ ಸಂಕರ್ಷಣ

ಶ್ರೀರಾಮ ಇಟ್ಟಣ್ಣವರ ಮೊದಲ ಕವನ ಸಂಕಲನ "ಹೊಳಿಸಾಲ ಬಳ್ಳಿ" ಗಂಡು ಹೆಣ್ಣಿನ ಕಾಮ – ಪ್ರೇಮ ಸಂಬಂಧದ ಸ್ವರೂಪ, ದಾಂಪತ್ಯದ ಸರಸ–ವಿರಸಗಳನ್ನು ಬಣ್ಣಿಸುವ ಪ್ರೇಮಗೀತೆಗಳ ಗುಚ್ಛ. ಹಳ್ಳಿಯ ಮುಗ್ಧತೆ, ನೈಸರ್ಗಿಕ ಸಹಜತೆ, ಸಹಬಾಳ್ವೆಯ ಪ್ರೇಮಮಯ ಪರಿಸರದಲ್ಲಿ ಪಸರಿಸಿದ 'ಹೊಳಿಸಾಲ ಬಳ್ಳಿ' ರಮ್ಯತೆಯ ತೋರಣ. ಅಲ್ಲಿಯ ಹೊಳೆ, ನೀರು, ಹಸಿರು, ಗುಡ್ಡ, ಹೊಲ, ಹಕ್ಕಿ, ಒಕ್ಕಲು ಮುಂತಾದವು ಗ್ರಾಮ ಪರಿಸರ ತೆರೆದಿಟ್ಟರೆ ಹುಡುಗ–ಹುಡುಗಿ, ಗಂಡ–ಹೆಂಡತಿ, ಗೆಳೆಯ–ಗೆಳತಿ, ಬಂಧು–ಬಳಗ ಪ್ರೇಮದ ವಿವಿಧ ರೂಪಗಳನ್ನು ದರ್ಶಿಸುವರು. ಹಳ್ಳಿಯ ಬದುಕೆಲ್ಲವೂ ಶುಭ್ರವೆಂದು ಹೇಳಲಾಗದು. ಅತ್ತೆ–ಸೊಸೆಗೆ ಆಗುವುದಿಲ್ಲ. ಪ್ರೇಮವನ್ನು ತಡೆಯುವ ಜಾತಿಗೋಡೆಗಳಿವೆ. ಕಾಡುವ ಕಪಿಗಳಿವೆ, ದೋಚುವ ಹುಲಿಗಳಿವೆ, ಆದರೆ ಅವರಲ್ಲೂ ಸಹಜತೆಯಿದೆ, ಸೋಗು ಇಲ್ಲ. ಮನಮಿಡಿಯುವ 'ಹೊಳಿಸಾಲ ಬಳ್ಳಿ' ದಾಟಿ 'ಗಾಲಿ' ನೋಡಿದರೆ ಸಾಂಸ್ಥಿಕ ಸಂಕರ್ಷಣ ಹೃದಯ ಹಿಂಡುತ್ತದೆ. 'ಹೊಳಿಸಾಲ ಬಳ್ಳಿ'ಯ ೧೪ ವರ್ಷಗಳ ತರುವಾಯ ಪಡಮೂಡಿದ 'ಗಾಲಿ' ಸ್ವಾಸ್ಥ್ಯ ಕಳೆದುಕೊಂಡ ಒತ್ತಡದ ಸಮಾಜವನ್ನು ಅನಾವರಣಗೊಳಿಸುತ್ತದೆ.

**ಸುತ್ತಮುತ್ತ ನಮಗೆತ್ತ ಹ್ವಾದರೂ**
**ಇಲ್ಲ ಸಮಾದಾನಾ**
**ದಾಂದಲಿ ಧೂಳಾಗ ಒಬ್ಬರಿಗೊಬ್ಬರ**
**ಕಳಕೊಂಡ್ಯೆವೋ ಅಣ್ಣಾ** [೧]

ಅಲ್ಲಿ ಪ್ರೀತಿಯ ಹೊಳೆ ಹರಿಯುತ್ತಿದ್ದರೆ ಇಲ್ಲಿ ದಾಂದಲೆಯ ಧೂಳು ಮುಸುಕಿದೆ. ನಡುಹಗಲಿನಲ್ಲಿಯೇ ಸೂರ್ಯ ಮುಳುಗಿದ ಕತ್ತಲೆ, ಸುತ್ತೆಲ್ಲ ಹಾವು. ಹೊತ್ತೇರಿದರೆ ಜಗಳದ ಸುದ್ದಿ, ಜಾತ್ರೆಯಲ್ಲಿ ಯಾರಿಗೂ ಯಾರೂ ಕಾಣುತ್ತಿಲ್ಲ. ಅಸ್ತಿತ್ವವನ್ನೇ ಕಳೆದುಕೊಂಡ ಸಮೂಹ ನಡುಬೀದಿಯಲ್ಲಿ ಬೆತ್ತಲಾದ ಜಿಗುಪ್ಸೆ. ಎಲ್ಲವನ್ನು ಕಳೆದುಕೊಂಡ ಹಳವಂಡ.

**ಕತ್ತಲ ಕಾವಳದಾಗ ಬಿದಕೊಂಡ**
**ಬಿಕ್ಕತಾವೋ ಜೀವಾ**
**ಆ ಅಂತ ಬಾಯಿ ತೆರಕೊಂಡ**
**ನಿಂತ್ಯೆತೋ ಸಾವಾ** [೨]

೧. ಇಲ್ಲ ಸಮಾಧಾನ : ಗಾಲಿ ಉಳತೈತಿ : ಪುಟ–೬
೨. ಅದೇ.

ಇಂಥ ಕರ್ಷಣದಲ್ಲಿ ಇಟ್ಟಣ್ಣವರ ಕಾವ್ಯ ಸಾಂಸ್ಥಿಕ ಬದುಕಿನತ್ತ ತುಡಿಯಿತು. 'ಗಾಲಿ ಉಳ್ಳತ್ಯೆತಿ' ಕವನ ಸಂಕಲನದಲ್ಲಿ ೨೪ ಕವಿತೆಗಳಿದ್ದು, ಅವುಗಳಲ್ಲಿ ಅರ್ಧಕ್ಕಿಂತ ಹೆಚ್ಚು, ಅಂದರೆ ೧೪ ಕವಿತೆಗಳು ಸಾಮಾಜಮುಖಿಯಾದವು. 'ಗಾಲಿ' ಇಟ್ಟಣ್ಣವರ ಕಾವ್ಯದ ಹೊಸ ತಿರುವು.

'ಹೊತ್ತು ಮೂಡುವ ಸಮಯ' ಈ ಕವಿಯ ವೈಚಾರಿಕ ಪ್ರಜ್ಞೆಗೆ ಒರೆಗಲ್ಲು. ಅವರ ಕಾವ್ಯಾಭಿವ್ಯಕ್ತಿಯ ಹೊಸ ಬಗೆಯನ್ನು ಇದರಲ್ಲಿ ಗುರುತಿಸಬಹುದು. ಹತ್ತು ಹಲವು ದೃಷ್ಟಿಗಳಿಂದ ಇದು ವಿಶಿಷ್ಟವಾದ ಸಂಕಲನವಿದೆ. ಇಲ್ಲಿಯ ಮುಕ್ಕಾಲು ಪಾಲು ಕವಿತೆಗಳು ಪ್ರಖರ ವೈಚಾರಿಕತೆಯನ್ನು ವಸ್ತುವಾಗಿಸಿಕೊಂಡಿವೆ.

ಶ್ರೀರಾಮ ಇಟ್ಟಣ್ಣವರ ಕಾವ್ಯದಲ್ಲಿಯ ಸಾಂಸ್ಥಿಕ ಸಂಕರ್ಷಣದ ನೆಲೆಗಳನ್ನು ಈ ಕೆಳಗಿನಂತೆ ವರ್ಗೀಕರಿಸುವುದು ಸೂಕ್ತವೆನಿಸುತ್ತದೆ.

೧. ಪ್ರಜಾತಾಂತ್ರಿಕ ನೆಲೆ

೨. ಅಸಮಾನತೆಯ ನೆಲೆ

೩. ನಗರೀಕರಣದ ನೆಲೆ

೪. ಯಾಂತ್ರೀಕರಣದ ನೆಲೆ

೫. ಸಾಂಪ್ರದಾಯಿಕ ನೆಲೆ



## ೪.೧. ಪ್ರಜಾತಾಂತ್ರಿಕ ಸಾಂಸ್ಥಿಕ ಸಂಕರ್ಷಣ :

'ಗಾಲಿ ಉಳ್ಳತ್ಯೆತಿ' ಕವನ ಸಂಕಲನದ 'ಗಾಲಿ' ನಮ್ಮ ಪ್ರಜಾತಾಂತ್ರಿಕ ಸಾಂಸ್ಥಿಕ ಸಂಕರ್ಷಣದ ರೂಪಕ. ಈ 'ಗಾಲಿ'ಯ ಪ್ರತಿಮೆ ವಿಚಿತ್ರ ಮತ್ತು ಅದ್ಭುತ. ಇದು ಬೇಂದ್ರೆಯವರ 'ಕುರುಡು ಕಾಂಚಾಣ'ದ ಮೂಜಾರಿಯನ್ನು ಹೋಲುತ್ತದೆ.

ತೇರು ಪ್ರಜಾತಾಂತ್ರಿಕ ವ್ಯವಸ್ಥೆಯ ಸಂಕೇತ. ಜಾತ್ರೆ, ಪ್ರಜ್ಞೆ ಕಳೆದುಕೊಂಡ ಜನಸಮುದಾಯ. ಕುಡಿದು ತೇರು ಏರಿದ ಮೂಜಾರಿ ನಮ್ಮ ಪ್ರಜಾಪ್ರತಿನಿಧಿ. ವಿಚಿತ್ರವೆಂದರೆ ಈ 'ಗಾಲಿ' ಗಾಂಧಿ ಚರಕಕ್ಕೆ ಆತಕೊಂಡೇ ಉರುಳುತ್ತಿರುವುದು.

'ಗಾಲಿ'ಯ ಹಲ್ಲುಮುಟೇದಾಗ ಜಾತಿ ಸುದ್ದಿ. ಅಚ್ಚಿನಲ್ಲಿ ನ್ಯಾಯ ನಿಬಾದಿ. ರಕ್ತದ ಕಟ್ಟಾದಾರಿಯಲ್ಲಿ ಮರ್ಯಾದೆಯನ್ನು ಕಚಾಕಚಾ ಕಡಿಯುತ್ತ

ತಿರಗತ್ಯೆತಿ ಇದ ತುಳದ ಹೇಸಿಗಿ
ಗಾಂಧೀ ಚರಕಾಕ ಆಧಾರಾಗಿ
ಗಾಲಿ ಉಳ್ಳತ್ಯೆತಿ ನಾಡಾಗ
ಗಾಲಿ ಉಳ್ಳತ್ಯೆತಿ ೩

ಈ 'ಗಾಲಿ'ಯ ಚಿತ್ರವೇ ಭಯಾನಕವಾದುದು. ಕೂಸಿನ ಕರುಳು ಸುತ್ತಿಕೊಂಡಿದೆ. ರಕ್ತ ಅಚ್ಚಿಗೆ ಮೆತ್ತಿಕೊಂಡಿದೆ. ರಕ್ತದಾಹಿ ರಣಹದ್ದುಗಳ ಹಿಂಡೇ 'ಗಾಲಿ'ಯ ಬೆನ್ನು ಹತ್ತಿದೆ.

---

೩. ಗಾಲಿ ಉಳ್ಳತ್ಯೆತಿ : ಗಾಲಿ ಉಳ್ಳತ್ಯೆತಿ : ಪುಟ-೧

ಧಡಧಡ ಧಡ ಧಡ ಇಳಕಲದಾಗ
ಬಡವರ ನಡಾತೊಡಿ ಕೂತ್ತಿಗಿ ಮ್ಯಾಗ
ಗಾಲಿ ಉಳ್ಳತೈತಿ । ನಾಡಾಗ
ಗಾಲಿ ಉಳ್ಳತೈತಿ [೪]

'ಗಾಲಿ' ಉರುಳುವ ರೀತಿ ಹೇಸಿಗೆ ಹುಟ್ಟಿಸುತ್ತದೆ. ಅದಕ್ಕೆ ಕರುಣೆಯಿಲ್ಲ, ಪ್ರೀತಿಯಿಲ್ಲ, ಕನಿಷ್ಠ ಮಾನವೀಯತೆ ಇಲ್ಲ. ಬಿದ್ದವರ ಮೇಲೆ ಉರುಳುವುದು ಅದರ ಸ್ವಭಾವ.

ಬಡವರ ಗುಡಸಲ ಕಂಬಾ ಕೊರದ
ಅಣ್ಣಾ ತಮ್ಮರ ಪ್ರೀತಿ ಹರದ
ಗಂಡಾ ಹೆಂಡಿರ ಮನಿಮಾರ ಮುರದ
ಕಾರಿನ ಧೂಳಾಗ ಹಣಿಬಾರ ಬರದ
ಹಲ್ಲಾಗ್ಡಿಡದ ಗರತಿ ಗುಳದಾಳಿ
ಗಾಲಿ ಉಳ್ಳತೈತಿ । ನಾಡಾಗ
ಗಾಲಿ ಉಳ್ಳತೈತಿ [೫]

ಈ 'ಗಾಲಿ' ಉರುಳುವುದನ್ನು ಜನಜಾತ್ರೆ ನೋಡುತ್ತಿದ್ದರೂ ಅದನ್ನು ತಡೆಯಲು ಯಾರೂ ಪ್ರಯತ್ನಿಸುತ್ತಿಲ್ಲ. ಅಲ್ಲಿರುವವರಲ್ಲಿ ಬಹಳಷ್ಟು ಜನರು ಕುಡಿದವರೇ. ಪ್ರಜಾಪ್ರಭುತ್ವವೆಂದರೆ ಪ್ರಜೆಗಳದ್ದೇ ಸರಕಾರ. ರಾಜನಂತೆ ಪ್ರಜೆ ; ಪ್ರಜೆಗಳಂತೆ ರಾಜ. ಅದಕ್ಕೆ ಹೆಸರು ಪ್ರಜಾಪ್ರಭುತ್ವ. ತೇರಿನಲ್ಲಿ ಕುಳಿತವನೂ ಕುಡಿದಿದ್ದಾನೆ; ಜಾತ್ರೆಗೆ ಬಂದವರೂ ಕುಡಿದಿದ್ದಾರೆ. ಯಾರಿಗೆ ಯಾರೂ ಹೇಳುವಂತಿಲ್ಲ. ಬುದ್ಧಿ ಹೇಳುವವನೇ 'ಬುದ್ಧಿಹೀನ', ಜನರು ಅವನನ್ನು 'ಮಳ್ಳನೆಂದು ಮೂದಲಿಸುವರು. ಅವನ ಸ್ಥಿತಿ ನಾಯಿಗೂ ಬೇಡ.

ಕಚೇರ್ಯಾಗ ಹೋಗಿ ಕೂಗಿ ಹೇಳತಾನ
ಹಿಡಿಸಿರೆಪ್ಪ ಹೊಲಸಾ
ಮೇಜ ಕುಟ್ಟಕ್ಯಾರ ಯಾಕ ಅಂತಾನ
ಹೆಂಡಿತಿನ್ನೂ ಕೆಲಸಾ
ಹಚಾಹಚಾ ಅಂತ ಹೊರಗ ಹಾಕತಾರ
ಇವನ ಮಾಡಿ ಒಂಟಿ
ಬಯಲಿಗಿ ಬಿದ್ದರ ಬತ್ತಲೆಯಾಗಿ
ಸುತ್ತು ಮುಳ್ಳ ಕಂಟಿ [೬]

ಜನರು ಮೋಟಾರ್ ಸೈಕಲ್ ಮೇಲೆ ಗಂಟೆಗೆ ನೂರು ಮೈಲು ವೇಗದಲ್ಲಿ ಓಡುತ್ತಿದ್ದರೆ

೪. ಅದೇ
೫. ಅದೇ
೬. ನಮ್ಮ ಮಳ್ಳ : ಗಾಲಿ ಉಳ್ಳತೈತಿ : ಪುಟ–೧೫

ಇಟ್ಟಣ್ಣವರ 'ಮಳ್ಳ' ಸಾಲ ಮಾಡಿ ಸೈಕಲ್ ಕೊಂಡು ತುಳಿಯುತ್ತಾನೆ. ಮನೆಯಲ್ಲಿಯೂ ಇವನಿಗೆ ಬೆಲೆ ಇಲ್ಲ.

**ಮನ್ಯಾಗಾದರೂ ಎಲ್ಲಿ ಸಮಾದಾನ**
**ಸಾಲ ಸೂಲ ಗೋಳಾ**
**ನೆರಿಹೊರಿ ಕೇಳಿ ಮಕ್ಕಳೂ ಅಂತಾರ**
**ನಮ್ಮ ಅಪ್ಪ ಮಳ್ಳ** [೭]

ಪ್ರಜಾಪ್ರಭುತ್ವದಲ್ಲಿ ಹಣ ಮಾಡದವ ಹೆಣಕ್ಕೆ ಸಮಾನ ಎಂಬುದು ಹೊಸ ಗಾದೆ. 'ಲಂಚ' ಕೇಳದ ಅಧಿಕಾರಿಗೆ 'ಅಂಜುಗುಳಿ' ಅನ್ನುತ್ತಾರೆ. ಬೆಲೆ ಕಳೆದುಕೊಂಡ ಪ್ರಾಮಾಣಿಕತೆಯ ದುರಂತವನ್ನು 'ನಮ್ಮ ಮಳ್ಳ' ಕಥಿಸುತ್ತದೆ.

ಪ್ರಜಾಪ್ರಭುತ್ವದಲ್ಲೀಗ ಹದ್ದು ಮೀರಿದ ಹದ್ದುಗಳದ್ದೇ ರಾಜ್ಯ. ಇವು ಕಾಣಲು ಬಲು ಸುಂದರ. ಆದರೆ ಭಯಂಕರ-ಭಯಾನಕ. ಇವು ಬಿಳಿಯಂಗಿ ರೆಕ್ಕೆಯ (ರಾಜಕಾರಣಿ) ಹದ್ದುಗಳು. ಹಿಂದೊಮ್ಮೆ ಪ್ಲೇಗು ಬಂದಾಗ ಹದ್ದು ಹಾರುತ್ತಿದ್ದವು. ಈಗ ದೇಶದ ತುಂಬೆಲ್ಲ ರಾಜಕೀಯ ಪ್ಲೇಗು. ಈ ಹದ್ದುಗಳು ಸದ್ದಿಲ್ಲದೆ ಸಾಮಾನ್ಯರ ಬೇಟೆಯಾಡುತ್ತವೆ. ಇದರಿಂದ ದೇಶದ ಸಾಮನ್ಯ ಪ್ರಜೆಗಳ ನೆಮ್ಮದಿ ಹಾಳಾಗಿದೆ. ಅವು ಬಡವರ ಮಕ್ಕಳ ಕೈಯೊಳಗಿನ ಒಣರೊಟ್ಟಿ ಕಸಿಯುತ್ತಿವೆ. ಗರತಿ ಗಂಗವ್ವನ ಕುಪ್ಪುಸದ ಗಂಟು ಬಿಚ್ಚುತ್ತಿವೆ. ಬಡವರ ಹೊಲದಲ್ಲಿಯ ಕಾಳು ಮುಕ್ಕಿ, ಕಣ್ಣಿಗೆ ಕಾಣದಂತೆ ಹಾರಿ ಮುಗಿಲೊಳಗೆ ನಿಲ್ಲುತ್ತವೆ. ಅವರು-

**ತುಂಬಿದ ಹೊಲದಲ್ಲಿ**
**ಚಂಡಿಯಾಡಿಸುತ್ತಿದ್ದಾರೆ**
**ಕಂಡೂ ಕಾಣದ ಹಾಗೆ**
**ಸಹಿಸಿಕೊಂಡಿದ್ದೇವೆ ಎಲ್ಲ.** [೮]

ಅರ್ಥಕಳೆದುಕೊಂಡ ಪ್ರಜಾಪ್ರಭುತ್ವವನ್ನು ಪ್ರಜಾರಾಜ್ಯೋತ್ಸವ ವಿಡಂಬಿಸುತ್ತದೆ.

**ಏಳು ಎದ್ದೇಳು, ಮಗು**
**ಇಂದು ಪ್ರಜಾರಾಜ್ಯೋತ್ಸವ**
**ಮಲಗಿದ ಮಗನ ಮೈದಡವಿ ಎಬ್ಬಿಸುತ್ತಾಳೆ ತಾಯಿ** [೯]

ಆ ಮಗು ಎದ್ದು ಅಂದು ಸಮಾರಂಭದಲ್ಲಿ ಒಪ್ಪಿಸಬೇಕಾದ ಗಿಳಿಪಾಠ ಮೆಲಕುಹಾಕುತ್ತದೆ. ತಾಯಿ ಮಗುವಿಗೆ ಯುನಿಫಾರಂ ತೊಡಿಸಿ, ಕೈಯಲ್ಲಿ ತಿರಂಗಾ ಧ್ವಜಕೊಟ್ಟು, ಪ್ರೀತಿಯಿಂದ ತಲೆನೇವರಿಸಿ ಶುಭಕೋರುತ್ತಾಳೆ.

---

೭. ಅದೇ
೮. ಕರೆಗಂಟೆ : ಹೊತ್ತು ಮೂಡುವ ಸಮಯ : ಪುಟ-೯
೯. ಪ್ರಜಾರಾಜ್ಯೋತ್ಸವ : ಹೊತ್ತು ಮೂಡುವ ಸಮಯ : ಪುಟ-೨೬

ಬಾಗಿಲಡಿ ನಿಂತ ತಾಯಿಯ
ತಿರುತಿರುಗಿ ನೋಡುತ್ತ
ಹತ್ತು ಅಡಿ ಹೋದವ ಮತ್ತೆ
ಹಿಂದಿರುಗಿದರೆ
ಕಣ್ಣರೆಪ್ಪೆಗಳಲ್ಲಿ ತಲ್ಲಣದ ರೇಖೆ
"ಮತ್ತೆ ಬಂದೆಯಲ್ಲ, ಏನಪ್ಪ ನಿನ್ನ ತಕರಾರು ?"
"ಊರಲ್ಲಿ ಇಂದೂ ಇದೆಯೇನಮ್ಮ
ದಾಂಧಲೆ ಗೋಳಿಬಾರು ?" ೧೦

ಮಗುವಿನ ಮುಗ್ಧಪ್ರಶ್ನೆಗೆ ನಮ್ಮ ಪ್ರಜಾಪ್ರಭುತ್ವದ ಸೋಗು ಕಳಚುತ್ತದೆ. ಅದರ ಅಸಲು ಸ್ವರೂಪ ಬಯಲಾಗುತ್ತದೆ. ಈ ಕರ್ಷಣದಲ್ಲಿ ಕವಿಗೆ ಅಸ್ತಿತ್ವದ ಹುಡುಕಾಟ ಮತ್ತೆ ಮತ್ತೆ ಕಾಡುತ್ತದೆ. ಕೊನೆಯಲ್ಲಿ ಒಂದು ಸಮಾದಾನ ಮಾಡುತ್ತದೆ.

ನನಗೆ ನಿನಗೆ
ನಮ್ಮಂಥ ಸಾಮಾನ್ಯರಿಗೆ
ಬದುಕು ಯಾವಾಗಲೂ ಅಷ್ಟೇ
ಯಾರೋ ಉಳಸಿ ಹೋದ ನೀರು.
ನೆಕ್ಕಿದಷ್ಟು
ದಕ್ಕಿದಷ್ಟು ೧೧

ಪ್ರಜಾತಾಂತ್ರಿಕ ವ್ಯವಸ್ಥೆಯಲ್ಲಿ ಅಸ್ಮಿತೆ (Identity) ಕಂಡುಕೊಳ್ಳುವುದೇ ಸಮಸ್ಯೆ. 'ಹೊತ್ತು ಮೂಡುವ ಸಮಯ' ಸಂಕಲನದ 'ಅಪಘಾತ' ಕವಿತೆ ಈ ಸಮಸ್ಯೆಯನ್ನು ಚೆನ್ನಾಗಿ ವಿಶ್ಲೇಷಿಸುವುದು. ರೈಲು ಉರುಳಿದೆ. ಸಾವು-ನೋವಿನ ಜಾತ್ರೆ ನೆರೆದಿದೆ. ಪೋಲೀಸರು ಶಂಕಿತರನ್ನು ಹುಡುಕಲು ಓಡುತ್ತಿದ್ದಾರೆ. ಕೈ-ಕಾಲು ಕಳೆದುಕೊಂಡವರು ನರಳುತ್ತಿದ್ದಾರೆ. ಸತ್ತವರ ಸುತ್ತಲೂ ಜನರ ವೃತ್ತ. ಆ ಜನಜಂಗುಳಿಯ ಮಧ್ಯದಲ್ಲಿ ಸುದ್ದಿ ಮಾಡುವ ಕ್ಯಾಮರಾಗಳಿಗೆ ದೃಶ್ಯಗಳನ್ನು ಕ್ಲಿಕ್ಕಿಸುವ ಗಡಿಬಿಡಿ. ಅಂಥದರಲ್ಲಿ ಒಬ್ಬ ಹುಡುಗ –

ಒಬ್ಬನೇ ಒಬ್ಬ ಓಡಾಡುತ್ತಿದ್ದಾನೆ
ಕಣ್ಣೀರು ಸುರಿಸುತ್ತ
ಒಡೆದ ತಲೆ ಒತ್ತಿಕೊಳ್ಳುತ್ತ
ಹುಡುಕುತ್ತಿದ್ದಾನೆ ತನ್ನ ಪೆಪ್ಪರ ಮೆಂಟಿನ ಡಬ್ಬಿ.

---

೧೦. ಅದೇ. ಪುಟ-೨೭
೧೧. ನೀರಾಸರೆ : ಹೊತ್ತು ಮೂಡುವ ಸಮಯ : ಪುಟ-೨೭

ಹೆಣ ಹುಡುಕುವವರು
ಹೆಣದ ಹಣ ಹುಡುಕುವವರು
ಓಡಾಡುತ್ತಿದ್ದಾರೆ ಅವನ ದಬ್ಬಿ ದಬ್ಬಿ.
ಡವಡವ ಎನುವ ಎದೆ ಹಿಡಿದುಕೊಂಡು
ಹಣೆ ಹಣೆ ಬಡಿದುಕೊಂಡು
ಅಳುತ್ತಲೇ ಇದ್ದಾನೆ ಹುಡುಗ ; ೧೨

ಪೆಪ್ಪರಮೆಂಟು ಹುಡುಕುವ ಹುಡುಗ ಕಳೆದ ತನ್ನ ಡಬ್ಬಿ ಹುಡುಕುವಂತೆ ಶ್ರೀಸಾಮಾನ್ಯ ಗದ್ದಲದ ವ್ಯವಸ್ಥೆಯಲ್ಲಿ ತನ್ನದನ್ನು, ತನ್ನತನವನ್ನು ಶೋಧಿಸುತ್ತಿದ್ದಾನೆ. ಹತ್ತಾರು ವರ್ಷಗಳಿಂದ ನೆಟ್ಟು ಕಡಿಯುತ್ತಿರುವ ಹುಡುಗನ ಬೆವರುಕುಡಿದ ನೆಲ ಅವನದಾಗುತ್ತಿಲ್ಲ. ಸಾಮಾಜಿಕ ಅಮಲು ತರುವ ಮದ್ಯ ಪ್ರಜಾರಾಜ್ಯದಿಂದ ಹೊರಹೋಗುತ್ತಿಲ್ಲ. ಇಂಥ ನೂರಾರು ಚಿಂತೆಗಳ ಕರ್ಷಣ ಇಲ್ಲಿಯ ಕವನಗಳಲ್ಲಿ ತುಂಬಿಕೊಂಡಿದೆ.

## ೪.೨. ಅಸಮಾನತೆಯ ಸಾಂಸ್ಥಿಕ ಸಂಕರ್ಷಣ :

ಭಾರತೀಯ ಸಮಾಜ ನಗರೀಕರಣದ ತಿರುವಿನಲ್ಲಿ ನಿಂತಿದೆ. ಇಂದು ಅಧಿಕಾರಿಗಳು, ರಾಜಕಾರಣಿಗಳು, ವಿದ್ಯಾವಂತರು, ಸಿರಿವಂತರು, ವ್ಯಾಪಾರಿಗಳು ಮುಂತಾದವರು ನಗರಗಳೆಡೆಗೆ ವಲಸೆ ಹೋಗುತ್ತಿದ್ದಾರೆ. ಸಿರಿವಂತರು-ಬಡವರು, ಪ್ರಭು-ಪ್ರಜೆ, ಬಂಡವಾಳಶಾಹಿ-ದುಡಿಮೆಗಾರರ, ಮಧ್ಯೆ ಹಿಂದೆಂದಿಗಿಂತಲೂ ಈಗ ಕಂದಕ ದೊಡ್ಡದಾಗುತ್ತಿದೆ. ಪ್ರಜಾಪ್ರಭುತ್ವದಲ್ಲಿ ಬೆಳೆಯಬಾರದ ಅಸಮಾನತೆ ಹೆಚ್ಚೆಚ್ಚು ಬೆಳೆಯುತ್ತಿರುವುದು ಕವಿಯಲ್ಲಿ ವಿಷಾದ ಸೃಷ್ಟಿಸಿದೆ. ಈ ವಿಷಾದವೇ ಅವರ ಹಲವು ಕವಿತೆಗಳಿಗೆ ವಸ್ತುವಾಗುತ್ತದೆ. ಮುಂದೊಂದು ದಿನ ಈ ಕರ್ಷಣ ಕ್ರಾಂತಿಗೆ ಕಾರಣವಾಗಬಹುದೆಂಬ ಆಶಯ ಅನೇಕ ಕವಿತೆಗಳಲ್ಲಿ ಅಡಕಗೊಂಡಿದೆ.

ಪ್ರಜಾಪ್ರತಿನಿಧಿಗಳನ್ನು ಬಿಟ್ಟರೆ ಸಾಮಾಜಿಕ ದಬ್ಬಾಳಿಕೆ ನಡೆಸುವವರು, ಅಧಿಕಾರಶಾಹಿಗಳು, ಮತ್ತು ಶ್ರೀಮಂತರು. ರೈತನ ಸಂಬಳದಿಂದಲೇ ಬದುಕುವ ಸರಕಾರಿ ನೌಕರರು ರೈತರನ್ನೇ ಅವಮಾನಿಸುವುದು ಈ ಕವಿಯನ್ನು ಕೆರಳಿಸಿದೆ.

ರೈತಗ ನೌಕರದಾರಗ ಇಂದ
ಅಂತರ ಬೆಳದsತಿ
ತಾನs ದೊಡ್ಡಾವಂತ ನೌಕರದಾರನ
ಕಣ್ಣ ಕಾಣದಾತಿ ೧೩

ನೌಕರದಾರರು, ಕಲಿತವರು, ರೈತರು, ನಿರಕ್ಷರಿಗಳು, ಕಲಿತವರು ಬುದ್ಧಿವಂತರು; ಕಲಿಯಲಾರದವರು ಶ್ರಮಮಂತರು. ಕಲಿತವರು ಬೆವರಿನಕ್ಕಿಂತಲೂ ಬುದ್ದಿ ದೊಡ್ಡದೆಂದು ವಾದಿಸುತ್ತ, ಸಾಮಾಜಿಕ ಮನ್ನಣೆ

---

೧೨. ಅಪಘಾತ : ಹೊತ್ತು ಮೂಡುವ ಸಮಯ : ಪುಟ-೪೮
೧೩. ತಿಳಿದ ನೋಡಿರಣ್ಣ : ಗಾಲಿ ಉಳ್ಳತೃತಿ : ಪುಟ-೨೨

ಪಡೆಯುತ್ತ, ಹೆಚ್ಚೆಚ್ಚು ಹಣ ಸಂಪಾದಿಸುತ್ತಲೇ ಇದ್ದಾರೆ. ರೈತರು ಬದುಕನ್ನೇ ಕಳೆದುಕೊಳ್ಳುತ್ತಿದ್ದಾರೆ. ಇಂಥ ಅಸಮಾನತೆಯನ್ನು ಅಧಿಕಾರಶಾಹಿ ವ್ಯವಸ್ಥೆ ವ್ಯವಸ್ಥಿತವಾಗಿ ಬೆಳಸುತ್ತಿರುವುದಕ್ಕೆ ಈ ಕವಿಯ ಆಕ್ರೋಶ.

**ಆಟೇಟಕೆಲ್ಲಾ ಹೊತ್ತೇರಿದರ**
**ಮಾಡತೀರಿ ಸಂಪ**
**ಉದ್ಯೋಗ ಬಿಟ್ಟ ಬೀದಿಗಿಳಿsತಿರಿ**
**ಕೂಗಿ ಗುಂಪ ಗುಂಪ**
**ಸುಕಾ ಉಂಡರೂ ಸೂಟಿ ಬೇಡತಿರಿ**
**ವಾರಕೆರಡ ದಿವಸ**
**ಜಡ್ಡ ಬಂದರೂ ದುಡಕಿ ತಪ್ಪುದಿಲ್ಲ**
**ರೈತಗಿಲ್ಲ ಹರುಸ** [೧೪]

ಕವಿಗೆ ನೌಕರದಾರರ ಸಾಮಾಜಿಕ ಮಾನ್ಯತೆ, ಸಂಬಳ, ಸವಲತ್ತುಗಳ ಬಗ್ಗೆ ಅಸಮಾದಾನವಿಲ್ಲ. ಬದಲಾಗಿ ರೈತರನ್ನು ನಿರ್ಲಕ್ಷಿಸುವ ಅವರ ಧೋರಣೆಯನ್ನು ಖಂಡಿಸುತ್ತಾರೆ. ಸಾಮಾಜಿಕ ಪಲ್ಲಟದ ಕ್ರಾಂತಿ–ಬರಬಹುದೆಂದು ಎಚ್ಚರಿಸುತ್ತಾರೆ.

**ಸೆಗಣಿ ಬಳದs ನಿಮ್ಮ ಅಜ್ಜಾ**
**ಅಪ್ಪಾ ಇಲ್ಲಿ ಕೂಡಿಸ್ಯಾರಪ್ಪಾ**
**ಎಚ್ಚರದಿಂದ ನಡಿಯೋ ತಮ್ಮಾ ಕೂನಾಬಿಡದ**
**ಕಾಡೂದ ಮುಗಿತಿ ನಮ್ಮ ನೆತ್ತ್ಯಾಗ ಮಳಿಬಡದ** [೧೫]

ಆರ್ಥಿಕ, ಸಾಮಾಜಿಕ, ರಾಜಕೀಯ, ಅಸಮಾನತೆಯ ಕುರಿತು ಜನಸಾಮಾನ್ಯರಲ್ಲಿ ಪ್ರಜ್ಞೆ ಮೂಡುತ್ತಿರುವುದನ್ನು ಕವಿ ಸೂಚಿಸುತ್ತ, ನಿಜವಾದ ಸಮಾನತೆಗೆ ಒತ್ತಾಯಿಸುವರು.

ರೈತ, ಕಾರ್ಮಿಕರ ಶೋಷಣೆ ಇಂದು ನಿನ್ನೆಯದಲ್ಲ. ಪ್ರಪಂಚದ ಚರಿತ್ರೆಯಲ್ಲಿ ಅದು ನಿರಂತರ ಸಾಗಿ ಬಂದಿದೆ. ಪ್ರಜಾಪ್ರಭುತ್ವ ಅದನ್ನು ತಡೆಯಬೇಕಿತ್ತು. ಆದರೆ ವಿಫಲಗೊಂಡಿದೆ. ಇವರ ಹೆಜ್ಜೆಗಳನ್ನು ಇತಿಹಾಸ ದಾಖಲಿಸಲಿಲ್ಲ; ರಾಜ ಮಹಾರಾಜರ ಚರಿತ್ರೆ ಕಥಿಸಿತು.

**ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು**
**ಗಾರೆಗಚ್ಚುಗಳ ತುಂಬಿದವು**
**ಇಜಿಪ್ತಿನ ಪಿರ್‍ಯಾಮಿಡ್‌ಗಳು**
**ಚೀನದ ಮಹಾಗೋಡೆ**
**ಇಂಡಿಯಾದ ತಾಜಮಹಲ್**
**ಹೀಗೆಯೇ ಸಾಲಾಗಿ ಕಣ್ಣು ತುಂಬುವ ಲೋಕ**

---

೧೪. ಅದೇ.
೧೫. **ಎಚ್ಚರದಿಂದ ನಡಿಯೋ ತಮ್ಮಾ : ಗಾಲಿ ಉಳ್ಳತ್ಯಿತಿ : ಪುಟ–೩೬**

ಬರೆದಿಟ್ಟರೇ ಯಾರಾದರೂ
ಹೆಜ್ಜೆ ಹುಣ್ಣಾದುದನು ?
ನೋಡಿದರೆ ಯಾರಾದರೂ
ಮಿಡುಕಿ ಮಣ್ಣಾದುದನು. ೧೬

ಎಲ್ಲ ಒತ್ತಡಗಳನ್ನು ಒತ್ತಿಕೊಳ್ಳುತ್ತ ಜನರ ಮನಸ್ಸು ಕ್ರಾಂತಿಗಾಗಿ ಕಾವುಗೊಳ್ಳುತ್ತದೆ. ಕ್ರಾಂತಿಯ ಕನಸು ಎಚ್ಚರಾದಾಗ ರೆಪ್ಪೆಯಿಂದ ಕಳಚಿಕೊಳ್ಳುತ್ತದೆ. ಹಸಿದ ಹೊಟ್ಟೆ ಕ್ರಾಂತಿಯ ಕನಸನ್ನು ಹೊಸೆದು ಹಾಕುವುದು.

ಚಿಕ್ಕ ಚಂದ್ರನ ತರಬೇಕಂದರ
    ಬಿಗದ ಮಟ್ಟೆಕಟ್ಟೆ
ಬಿಕ್ಕಿ ಬಿಕ್ಕಿ ನೆಲಬುರಕಿ ಬಿದ್ದ
    ಹೊಸಿತಾವೊ ಹಸದ ಹೊಟ್ಟೆ ೧೭

ಕ್ರಾಂತಿ ಎಂದರೆ ಹುಟ್ಟು–ಸಾವಿನ ಸಂಘರ್ಷ. ಹುತ್ತಿನಲ್ಲಿ ಕೆಚ್ಚು ಬಿದ್ದಾಗ ಹಾವು ಬುಸುಗುಡುತ್ತ ಹೊರಬರುವುದು. ಹಾವು ಬರುವುದನ್ನೆ ಹದ್ದು ಕಾಯುತ್ತಿರುತ್ತದೆ.

ಹದ್ದ ಹಾಂವಿಗೆ ಜಿದ್ದ ಸಾಗೇತಿ
    ಆದಿ ಬುನಾದಿಂದ
ತಪ್ಪಲಿಲ್ಲ ಈ ರಕ್ತ ಹರ್‍ಯೂದು
    ಕ್ರಾಂತಿ ಎಷ್ಟೊ ಬಂದ ೧೮

ಕ್ರಾಂತಿಯ ವೈಫಲ್ಯವನ್ನು ಡಾ. ಇಟ್ಟಣ್ಣವರ ಧೈರ್ಯದಿಂದ ಘೋಷಿಸುವರು. ಅದು ನೇತಾರರನ್ನು ಮೆರೆಸುತ್ತದೆ. ಜನ ಸಾಮಾನ್ಯರನ್ನು ಮತ್ತೆ ತನ್ನ ಕಾಲಡಿಯಲ್ಲಿ ಕರಗಿಸುತ್ತದೆ.

ತಪ್ಪಿ ಕಣ್ಣೀರ ಕೂಳ ಸಿಗೂತನಾ
    ಕ್ರಾಂತಿ ಕೂಗತೈತಿ
ಸಿಕ್ಕಮ್ಯಾಗ ಅದ ಹಸದ ಹೊಟ್ಟೆಮ್ಯಾಗ
    ಜಾಡಿಸೊದಿsತೈತಿ
ಉರುಳು ಚಕ್ರ ಇದರ್‍ಹಲ್ಲ ತೆಳಗ
    ನಾವೆಲ್ಲ ನುಗ್ಗನುಗ್ಗಾ
ಏಳಲಾರದ ಹೆಣಾ ಮಲಗತಾವ
    ತೋಡಿ ತೋಡಿ ತೆಗ್ಗಾ ೧೯

---

೧೬. ಹೆಜ್ಜೆಗಳು : ಹೊತ್ತು ಮೂಡುವ ಸಮಯ : ಪುಟ–೨೫
೧೭. ಕ್ರಾಂತಿ : ಗಾಲಿ ಉಳ್ಳತೈತಿ : ಪುಟ–೫೬
೧೮. ಅದೇ :
೧೯. ಅದೇ.

ಅಸಮಾನತೆಯನ್ನು ಅಳಿಸುವುದು ಕ್ರಾಂತಿಗೂ ಸಾಧ್ಯವಿಲ್ಲ. ಜಾತಿಗಳ ಗೋಡೆ ಕೆಡವಿದರೆ ವರ್ಗಗಳ ಕೋಟೆ ಏಳುವದು. ಪ್ರಜಾಪ್ರಭುತ್ವ ಬಂದು ಸಮಾನತೆ ಬಂತು ಎನ್ನುವುದರೊಳಗೆ ರೈತ-ನೌಕರರ ವರ್ಗ ನಿರ್ಮಾಣಗೊಂಡವು. ಅಸಮಾನತೆ ವ್ಯವಸ್ಥೆಗೆ ತಕ್ಕಂತೆ ತನ್ನ ರೂಪು ಬದಲಿಸುತ್ತ ಹೋಗುವುದು ಸಾಂಸ್ಥಿಕ ಸತ್ಯ.

## ೪.೩. ನಗರೀಕರಣದ ಸಾಂಸ್ಥಿಕ ಸಂಕರ್ಷಣ :

ನಗರೀಕರಣ ಜಾಗತೀಕರಣದ ಮುನ್ಸೂಚನೆ. ಭಾರತೀಯರದು ಸಹಜತೆ ಬಯಸುವ ಮನಸ್ಸು. ಕ್ರಮೇಣ ಎಂಥ ಒತ್ತಡಕ್ಕೂ ಒಗ್ಗಿಕೊಳ್ಳುವ ಗುಣ ಅದರದಾಗಿದ್ದರೂ ಮೊದಮೊದಲು ಒತ್ತಡವನ್ನು ವಿರೋಧಿಸುವುದು ರೂಢಿ. ಅಂಥ ಒತ್ತಡಗಳಲ್ಲಿ ನಗರೀಕರಣವೂ ಒಂದು. ನಗರೀಕರಣವನ್ನು ವಿರೋಧಿಸುತ್ತಲೇ ನಾಗರಿಕರಾಗಬೇಕೆನ್ನುವ ಉತ್ಕಟತೆ ಗ್ರಾಮೀಣ ಪ್ರದೇಶದಲ್ಲಿ ಕಾಣುತ್ತಿದೆ. ಇಂಥ ಸಂಕರ್ಷಣದ ಅನೇಕ ಅಲೆಗಳು ಇಟ್ಟಣ್ಣವರ ಕಾವ್ಯದಲ್ಲಿ ತರಂಗಿತಗೊಳ್ಳುವವು.

ಅಜ್ಜ ಫ್ಯಾಶನ್ ವಿರೋಧಿ. ಮೊಮ್ಮಗಳು ಫ್ಯಾಶನ್ ಪ್ರಿಯಳು-
ಇಷ್ಟ ದೊಡ್ಡಕ್ಯಾಗಿ ಏನ ಹಾಕತಿ
ಜಂಪರ ಪರಕಾರ
ಸೀರಿ ಉಟ್ಟರ ಎಷ್ಟು ತಿಳೂ ಅಂತ
ಅಜ್ಜನ ತಕರಾರ [೨೦]

ಇದು ಎರಡು ತಲೆಮಾರುಗಳ ಸಾಮಾಜಿಕ ಸಂಘರ್ಷವೂ ಹೌದು; ಸಾಂಸ್ಕೃತಿಕ ಸಂಘರ್ಷವೂ ಹೌದು. ಹಳ್ಳಿಯ ನಗರೀಕರಣದ ಮೊದಲ ತುಡಿತ ಕಾಣುವುದು ಫ್ಯಾಶನ್ನಿನಲ್ಲಿ.

ಬಹಳಷ್ಟು ನಮ್ಮ ಕವಿಗಳು ಗ್ರಾಮೀಣ ಪರಿಸರದವರು. ಅವರು ನಗರೀಕರಣವನ್ನು ವಿರೋಧಿಸುವರು. ಕಾಂಕ್ರೀಟ ಕಾಡುಗಳು ಅವರನ್ನು ಕಾಡುತ್ತವೆ. ಯಾಂತ್ರಿಕ ಬದುಕಿಗೆ ಕಾರಣವಾಗುತ್ತಿರುವ ನಗರಗಳು 'ನರಕ' ಸೃಷ್ಟಿಸುವುದು ನೋವು ತಂದಿದೆ. ಅದಕ್ಕೆ ಅವರು ನಗರೀಕರಣವನ್ನು ಒಪ್ಪುವುದಿಲ್ಲ. ಅಂಥವರಲ್ಲಿ ಇಟ್ಟಣ್ಣವರ ಕೂಡ ಒಬ್ಬರು. ವಿಚಿತ್ರವೆಂದರೆ ನಗರೀಕರಣವನ್ನು ವಿರೋಧಿಸುವ ಬಹುಪಾಲು ಕವಿಗಳು ನಗರ ಜೀವನಕ್ಕೆ ಹೊಂದಿಕೊಂಡಿರುವುದು ಅನಿವಾರ್ಯ. ಅದೇನಿದ್ದರೂ ನಗರಗಳ ಇತಿಹಾಸ ರಕ್ತದಲ್ಲಿ ಬರೆಯಲ್ಪಡುತ್ತಿರುವುದು ಭಯದ ಸಂಗತಿ. ನಗರದ ಸೂರ್ಯೋದಯವೇ ಭಯಾನಕ-

ಅನಿವಾರ್ಯ ಕರ್ಮದ ನೊಗಕ್ಕೆ
ಬೆದರಿದ ಸಪ್ತಾಶ್ವ ಹೂಡಿ
ರಥವೇರಿ ಬರುತ್ತಾನೆ ಅರುಣ
ಗಾಬರಿಗೊಂಡ ಸೂರ್ಯ
ಹಾಕುತ್ತಿರುವಂತೆ ಹಣಿಕೆ

---

೨೦. ಅಜ್ಜ ಕಾಡತಾನು : ಗಾಲಿ ಉಳ್ಳತೈತಿ : ಪುಟ-೩

ಚಡಪಡಿಸುವ ಸುಡುವ ಕೈಗಳಿಂದ
ರಕ್ತದಿಂದ ತಪತಪ ತೊಯ್ದು
ಪೇಪರು ಒಗೆಯುತ್ತಾನೆ ಹುಡುಗ
ಸೂರ್ಯನ ಮುಖಕ್ಕೆ. ೨೧

ಗ್ರಾಮೀಣ ಪ್ರದೇಶದವರಿಗೆ ನಗರ ಸ್ವರ್ಗದ ಆಕರ್ಷಣೆ. ನಗರದವರ ಊಟ-ಉಡಿಗೆ-ತೊಡಿಗೆಗಳು ಕುತೂಹಲದ ವಸ್ತುಗಳು. ಅವರಿಗೂ ನಗರಕ್ಕೆ ಹೋಗುವ ಆಶೆ. ಆದರೆ ನಗರ ಬದುಕಿನ ಪೊಳ್ಳುತನ ತಿಳಿದಿಲ್ಲ. ಅದನ್ನು 'ಶಾರ ಲಾವಣಿ' ತಿಳಿಸುತ್ತದೆ.

ಹೊಟೆಲ್ ಸಿನೇಮಾಕ್ ರೊಕ್ಕ ಹೋಗತತಿ
ಬಳಸಿದ್ಹಾಂಗ ನೀರs
ಸುಮ್ಮ ಎರಡ ದಿನಾ ಚೈನಿ ಮಾಡಲಾಕ
ಪಾಡ ಶಾರದೂರ
ಕನಸಿನ್ಯಾಗ ಸದೆ ಕಾಣಬರೂದಿಲ್ಲ
ಗಟ್ಟಿ ಹಾಲ ಮೊಸರs ೨೨

ಏನ ಮಾಡುದು ಭಾಳ ಕುಡಿsತಾವ
ಶಾರ ಎಮ್ಮಿ ನೀರ ೨೩

ನಗರದ ಬದುಕಿಗೆ ಆದಾಯ ಸಾಕಾಗುವುದಿಲ್ಲ. ಎಲ್ಲದಕ್ಕೂ ಸರತಿ (ಕ್ಯೂ). ವಸ್ತುಗಳಲ್ಲಿ ಕಲಬೆರೆಕೆ. ಬಾಡಿಗೆ ಮನೆಯ ಸಂಕಟವಂತೂ ಹೇಳತೀರದು.

ಬಾಡಿಗೆ ಮನಿಯಾಗ ಹತ್ತಿ ಸಂಸಾರ
ಮಕ್ಕಳ ಗಂಡಾಹೇಂತಿ
ಗ್ವಾಡಿಗೆ ಬಡಿತಾವ ಕಾಲ ಬಾಚಿ
ಮಲಗಿದರ ಅಷ್ಟ ಹತ್ತಿ. ೨೪

ಅತಿಥಿಗಳು ಬಂದರೆ ಗತಿಗೇಡು. ಮನೆಯ ಯಜಮಾನ ಅತಿಥಿಗಳನ್ನು ಮನೆಯಲ್ಲಿ ಮಲಗಿಸಿ ತಾನು ಲಾಜಿಂಗ್ ಹುಡುಕಲು ಹೋಗುವ ಫಜೀತಿ.

ಸುಳ್ಳ ಗೆಳೆಯಾ ಕರದಾನಂತ ಮನಿಹಿರ್‍ಯಾ
ಲಾಜಿಂಗಿಗೆ ಬಂದಾ

---

೨೧. ಹೊತ್ತು ಮೂಡುವ ಸಮಯ : ಹೊತ್ತು ಮೂಡುವ ಸಮಯ : ಪುಟ-೨
೨೨. ಶಾರಲಾವಣಿ : ಗಾಲಿ ಉಳ್ಳತ್ಯತಿ : ಪುಟ-೩೪
೨೩. ಅದೇ. ಪುಟ-೩೨
೨೪. ಅದೇ.

**ಬಾಳ ಜನರಿಗೆ ಅನಸತ್ಯೆತಿ**
**ಶಾರದೂರ ಚೆಂದ** [೨೫]

ಪ್ರಸ್ತುತ ಲಾವಣಿಯ ಕೊನೆಯ ಚರಣ ಮಹತ್ವಪೂರ್ಣವಾದುದು. ಕವಿ ನಗರದ ಯಾಂತ್ರಿಕ ಬದುಕನ್ನು ವರ್ಣಿಸುತ್ತ, ಕರ್ಷಣ ಖಂಡಿಸುತ್ತ, ಹಳ್ಳಿಯ ಜೀವನ ವೈಭವೀಕರಿಸದಿರುವುದು ನೆನಪಿಡಬೇಕಾದ ಅಂಶ. ಇಂದು ಹಳ್ಳಿಗಳು ಸಹಜತೆ ಉಳಿಸಿಕೊಂಡಿಲ್ಲವೆಂದು ಕವಿಗೂ ಗೊತ್ತಿದೆ –

**ಹಳ್ಳಿ ಬೇಸಿ ಅಂತ ಶ್ರೀರಾಮಗಂದ್ರ**
**ಆದ ಮತ್ತೊಂದ ಕತಿ ಅಂದಾ** [೨೬]

ಹಳ್ಳಿಗಳು ಕುರುಡ ಸಂಪ್ರದಾಯದ ಹುತ್ತಗಳಾಗುತ್ತಿವೆ. ಅಲ್ಲಿಯ ಕರ್ಷಣದ ಸ್ವರೂಪ ಮತ್ತೊಂದು ವಿಧ. ಡಾ. ಶ್ರೀರಾಮ ಇಟ್ಟಣ್ಣವರ ಒಂದು ವಿಚಾರ ಒಪ್ಪುವಂಥದ್ದು. ನಗರೀಕರಣ ಸಮಾಜವನ್ನು ವಿಭಾಗಿಸುತ್ತಿರುವುದು. ಹಣ, ಅಧಿಕಾರ, ಅಂತಸ್ತಿನವರು ನಗರದಲ್ಲಿ ನೆಲೆಸಿದರೆ ಹಳ್ಳಿ ಬಡವ–ದಲಿತ–ಶ್ರೀಸಾಮಾನ್ಯರ ಗೂಡಾರವಾಗುತ್ತಿದೆ. ಮೂಲಭೂತ ಸೌಕರ್ಯಗಳೆಲ್ಲ ನಗರದವರಿಗೆ ಮೀಸಲು. ನಗರೀಕರಣ ಹಳ್ಳಿಯವರನ್ನು ದ್ವಿತೀಯ ದರ್ಜೆಯ ಪ್ರಜೆಗಳನ್ನಾಗಿಸಿದೆ.

**ಕಲಿತವರೆಲ್ಲ ಗುಡ್ಡದ ಸರಿಮಾಡಿ**
**ಬೆಳಿಸ್ಯಾರೋ ಶಾರಾ**
**ಗುಡ್ಡದ ಮಗ್ಗಲ ಕೊಳದಾಗ ಹರಿತಾವ**
**ಬಡವರ ಕಣ್ಣೀರಾ** [೨೭]

ನಗರ–ಹಳ್ಳಿಗಳ ನಡುವಣ ಪಕ್ಷಪಾತ ಮತ್ತೊಂದು ಕ್ರಾಂತಿಗೆ ಕಾರಣವಾದೀತು ಎನ್ನುವ ಎಚ್ಚರಿಕೆ ಇಟ್ಟಣ್ಣವರದು –

**ಕೊಳ್ಳದ ತಳದಾಗ ಹೋಗಿ ಕಾಣತತಿ**
**ಎಚ್ಚರಾಗರಿನ್ನ**
**ಏಳಬಾರದುರಿ ಎದ್ದಿತಂದರ**
**ತೀಳದಿತು ನಿಮ ಬಣ್ಣ.** [೨೮]

ಉರಿ ಏಳುವ ಮೊದಲೇ ಸರಕಾರ ಎಚ್ಚೆತ್ತುಕೊಳ್ಳಬೇಕಿದೆ. ನೀರು–ವಿದ್ಯುತ್–ರಸ್ತೆಯಂಥ ಹಲವು ಸೌಲಭ್ಯಗಳಲ್ಲಿ ನಿರಂತರ ಪಕ್ಷಪಾತ ನಡೆಯುತ್ತಿರುವುದು ಕವಿಯನ್ನು ಕೆರಳಿಸಿದೆ. ನಗರೀಕರಣದ ವಿರೋಧದ ಹಿಂದೆ ನಾಗರಿಕ ಸಮಾನತೆಯ ಒತ್ತಡವಿದೆ. ನಗರ–ಗ್ರಾಮಗಳೆರಡರಲ್ಲಿಯೂ ಹಲವು ದೌರ್ಬಲ್ಯಗಳಿವೆ.

---

೨೫. ಅದೇ ಪುಟ–೫೩
೨೬. ಅದೇ ಪುಟ–೫೪
೨೭. ತಿಳಿದ ನೋಡಿರಣ್ಣಾ : ಗಾಲಿ ಉಳ್ಳತ್ಯೆತಿ : ಪುಟ–೨೪
೨೮. ಅದೇ.

ಡಾ. ಇಟ್ಟಣ್ಣವರ ಎರಡರ ದೌರ್ಬಲ್ಯಗಳನ್ನು ಬಯಲುಗೊಳಿಸುತ್ತಾರೆ. ನಗರದಲ್ಲಿ ಸಹಜತೆ, ಗ್ರಾಮದಲ್ಲಿ ಆಧುನಿಕತೆ ಅಪೇಕ್ಷಿಸುತ್ತಾರೆ.

### ೪.೩. ಯಾಂತ್ರೀಕರಣದ ಸಾಂಸ್ಥಿಕ ಸಂಕರ್ಷಣ :

ಯಂತ್ರಗಳಿಗೂ ನಗರಗಳಿಗೂ ಕರುಳ ಬಳ್ಳಿಯ ನಂಟು. ಅಂದು ನಗರಗಳಲ್ಲಿ ಸ್ವರ್ಗ ಸೃಷ್ಟಿಸಿದ ಯಂತ್ರಗಳೇ ಇಂದು ಅವುಗಳನ್ನು ನರಕದ ಕೂಪಗಳಾಗಿಸಿವೆ. ಮಾನವನ ಪ್ರಗತಿಯ ಮಂತ್ರವಾದ ವಿಜ್ಞಾನವೇ ಶಾಪವಾಗುತ್ತಿರುವ ಅಪಾಯದ ಸೂಚನೆ ಇಟ್ಟಣ್ಣವರ ಕಾವ್ಯದಲ್ಲಿದೆ. ಮಾನವನನ್ನು ಅಂದು ಕಾಡಿನಿಂದ ನಾಡಿನೆಡೆಗೆ ತಂದ ವಿಜ್ಞಾನವೇ ಇಂದು ಅವನನ್ನು ನಾಡಿನಿಂದ ಕಾಡಿನೆಡೆಗೆ ಓಡುವಂಥ ವಾತಾವರಣ ನಿರ್ಮಿಸಿದೆ.

**ಕಟೆದರೆ ಚಕಮುಕಿ ಹೊರಟಿತು ಕಿಡಿಬೆಂಕಿ**
**ಅಂದಿಗಿ ವಿಜ್ಞಾನಿ ಅವತಾರ**
**ಅದನೋಡಿ ಇದನೋಡಿ ಬೇಸಾಯ ಹದಮಾಡಿ**
**ಹೊಂದಿ ಬೆಳೆದಾರಣ್ಣ ಊರೂರ** ೨೯

ಬಸ್ಸು, ಟ್ರೇನು, ವಿಮಾನಗಳಲ್ಲಿ ಕುಳಿತು ಹಾರಿದೆವು. ಟಿ.ವಿ. ನೋಡುತ್ತ ಸುಖದ ಸೋಪಾನದಲ್ಲಿ ಕುಸಿದೆವು. ಯಂತ್ರಗಳೊಂದಿಗೆ ಯಂತ್ರಗಳಾಗಿ ದುಡಿಯುತ್ತ ಪ್ರಗತಿಮಂತ್ರ ಜಪಿಸಿದೆವು. ನೆಲಜಲ ಮುಗಿಲು ಮಣ್ಣು ಎಲ್ಲವನ್ನು ಸಣ್ಣ ಸಾಣೆಗಿ ಹಿಡಿದು ಚಾಣಿಸಿದೆವು.

**ಬೆವರಿಳಿಸಿ ದುಡಿದರು ಸಿಹಿಹಣ್ಣ ನೆಟ್ಟರು**
**ಅಲ್ಲಲ್ಲಿ ಕಹಿ ಹಣ್ಣ ಬಿಟ್ಟಾವೋ**
**ಹಚ್ಚಿಟ್ಟ ಹಣತೆಲ್ಲ ಮನೆಯ ಬೆಳಗಲಿಲ್ಲ**
**ಸಿಡಿಮದ್ದ ಮನೆಮಾರ ಸುಟ್ಟಾವೋ** ೩೦

ವಿಜ್ಞಾನಿ ಸೃಷ್ಟಿಸಿದ ಬಾಂಬು ರಾಜಕಾರಣಿಯ ಕೈ ಸೇರಿತು. ಯುದ್ಧ ಹೊತ್ತಿದಾಗ ವಿಜ್ಞಾನಿಗೂ ದಿಗಿಲು. ಮನುಕುಲ ವಿನಾಶದ ಧೂಮ ಹೊಗೆಯಾಡತೊಡಗಿದೆ. ಬಣ್ಣದ ಬದುಕು ಮಸಿಯಾಗುತ್ತಿದೆ. ನವಿಲು ಕಣ್ಣುಗಳಲ್ಲಿ ಹುಣ್ಣುಗಳು. ಭೂಮಿಯ ತುಂಬೆಲ್ಲ ತಗ್ಗುಗಳು, ಹೊಳೆಯ ನೀರಿನಲ್ಲಿ ವಿಷ, ಮಣ್ಣಿನೊಳಗೆ ಬಾಂಬುಗಳು.

**ಊರು ಕೇರಿಗಳಲ್ಲಿ**
**ಬಯಲು ಬಾಂದಳದಲ್ಲಿ**
**ಹಬ್ಬಿರುವ ನಂಜನ್ನು ಬಲ್ಲರೇನು ?**
**ಅಭಯ ರಕ್ಷಣೆ ನೀಡಿ**

---

೨೯. ನಾಡಿನಿಂದ ಕಾಡಿಗೆ : ಹೊತ್ತು ಮೂಡುವ ಸಮಯ : ಪುಟ-೧೪

೩೦. ಅದೇ. ಪುಟ-೧೪, ೧೫.

ಉಸಿರುಗರೆಯುವ ತಾಯ
ತೊಡೆಯಿಂದ ಕೂಸೆತ್ತ ಬಲ್ಲರೇನು ? ೩೧

ಇಂದು ವಿಜ್ಞಾನ ಶ್ರೀಮಂತ-ಅಧಿಕಾರಿ-ರಾಜಕಾರಣಿಗಳ ಸೆರೆಯಾಗಿದೆ. ಅವರು ಅದನ್ನು ತಮ್ಮ ಸ್ವಾರ್ಥಕ್ಕಾಗಿ ದುಡಿಸಿಕೊಳ್ಳುತ್ತಿದ್ದಾರೆ. ಅದು ಸಮುದಾಯದ ಹಿತ ಕಾಪಾಡುವ ಬದಲು ಸ್ವಾರ್ಥಿಗಳ ಸ್ವಾರ್ಥಕ್ಕೆ ಬಳಕೆಗೊಳ್ಳುತ್ತಿರುವುದು ಮತ್ತೊಂದು ಸಾಮಾಜಿಕ ವಿಪರ್ಯಾಸ. ಇಟ್ಟಣ್ಣವರ 'ಹೊತ್ತು ಮೂಡುವ ಸಮಯ'ದ ನಾಡಿನಿಂದ ಕಾಡಿನೆಡೆಗೆ ಹಾಗೂ ಸಸ್ಯಶ್ಯಾಮಲೆ ಕವನಗಳು ಯಾಂತ್ರೀಕರಣದ ಸಾಂಸ್ಥಿಕ ಕರ್ಷಣವನ್ನು ಅನಾವರಣಗೊಳಿಸುತ್ತವೆ. 'ಹೊತ್ತು ಮೂಡುವ ಸಮಯ' ಈ ಕವಿಯ ಕಾವ್ಯದ ಯುಗಾದಿ, ಸಾಮಾಜಿಕ ವೈರುಧ್ಯಗಳನ್ನು ವೈಚಾರಿಕ ನೆಲೆಯಲ್ಲಿ ಅಳೆಯುವ ಆರೋಗ್ಯಪೂರ್ಣ ಚಿಂತನೆಯ ಮೊದಲ ದರ್ಜೆಯ ಕವನ ಸಂಕಲನ.

## ೪.೪. ಸಾಂಪ್ರದಾಯಿಕ ಸಾಂಸ್ಥಿಕ ಸಂಕರ್ಷಣ :

ಕವಿ ಇಟ್ಟಣ್ಣವರ ನಗರ ಜೀವನದ ವೈರುಧ್ಯಗಳನ್ನು ವಿವರಿಸುತ್ತಲೇ ಗ್ರಾಮೀಣ ಬದುಕಿನ ಕುರುಡು ಸಂಪ್ರದಾಯಗಳನ್ನು ಗೇಲಿಮಾಡಿದ್ದಾರೆ. ಹಳ್ಳಿಗಳಲ್ಲಿ ಜಾತಿಯ ಜ್ವರ ವಿಪರೀತ. ಅವು ವೈಚಾರಿಕ ಗಾಳಿಗೆ ತೆರೆದುಕೊಳ್ಳುತ್ತಿಲ್ಲ. ವಿದ್ಯಾವಂತರು ಜಾತಿಗೋಡೆಗಳನ್ನು ಸ್ಫೋಟಿಸಲು ಹೋದಾಗ ಸಾಮಾಜಿಕ, ಕೌಟುಂಬಿಕ ಸಂಬಂಧಗಳು ತಡೆಯುತ್ತವೆ. ಹಳ್ಳಿಯ ಜನರಿಗೆ ಜಾತಿ ಮತ್ತು ಧರ್ಮದ ನಡುವಿನ ಅಂತರ ತಿಳಿದಿಲ್ಲ. ಅವರ ಲೆಕ್ಕದಲ್ಲಿ ಜಾತಿ ಎಂದರೆ ಧರ್ಮ; ಧರ್ಮ ಎಂದರೆ ಜಾತಿ. ವಿದ್ಯಾವಂತ ಮಗ ತನ್ನ ವೈಚಾರಿಕತೆಯಿಂದ ತಾಯಿಗೆ ಸಮಸ್ಯೆಯಾಗುವ ಸನ್ನಿವೇಶವನ್ನು 'ದೇವರ ಪುಣ್ಯದಿಂದ' ಕವನ ಸಾದರಪಡಿಸುತ್ತದೆ.

ಜಾತಿಗೀತಿ ಎಲ್ಲಾ ಸುಳ್ಳಂತ
ಊಟ ಉಡಿಗಿ ಭೇದ ಇರಬಾರದಂತ
ಆಳಿಗೆಲ್ಲ ಕಪಬಸಿ ಕೊಡತಾನ
ಕಲ್ಲಗ್ಹೇಟ್ಟೆಕ್ಕಾರ ಹೊಸಾ ಪರ್ಯಾಣ. ೩೨

'ಪರ್ಯಾಣ' ಸಂಪ್ರದಾಯ, ಕಪಬಸಿ ಆಧುನಿಕತೆ. ವಿದ್ಯಾವಂತ ಸಂಪ್ರದಾಯ ಮುರಿದು ವೈಚಾರಿಕ ಕ್ರಾಂತಿಗೆ ಕೈಹಾಕಿದರೆ ತಾಯಿಗೆ ತಡೆಯಲಾಗದ ತಳಮಳ. ಅವಳಿನ್ನು ಸಂಪ್ರದಾಯದ ಕತ್ತಲೆಯಲ್ಲಿಯೇ ಕುಳಿತಿದ್ದಾಳೆ –

ಊರ ಜನಾ ಎಲ್ಲಾ ನನ್ ಬೈತೈತಿ
ತಿಳೀವಲ್ದ ಇಂವಗೇನಾಗೇತಿ
ಉಗಳಲ್ಯಾಂಗ ನಾ ನುಂಗಲಿ ಹ್ಯಾಂಗ್
ಗಂಟಲ್ದಾಗ ಸುಡು ತುಪ್ಪದ ಹಾಂಗ

೩೧. ಸಸ್ಯಶ್ಯಾಮಲೆ : ಹೊತ್ತು ಮೂಡುವ ಸಮಯ : ಪುಟ-೪೬
೩೨. ದೇವರ ಪುಣ್ಯದಿಂದ : ಗಾಲಿ ಉಳ್ಳತೈತಿ : ಪುಟ-೨೦

ಹ್ಯಾಂಗ ಮಾಡತಿ ಹಣಿಬಾರದ್ದೊತ್ತಾ
ಶಾಣ್ಯಾ ಆಗಿ ಇಂವ ತಂದಾನ ಕುತ್ತಾ. [೩೩]

ಮಗನ ಈ ವರ್ತನೆಗೆ ಯಾರೋ ಮಾಟ ಮಾಡಿಸಿರಬೇಕೆಂಬುದು ಅವ್ವನ ಮಕಾರು. ಇನ್ನು ಅಜ್ಜನ ತಕರಾರು ಬೇರೆ –

ಹೆಣ್ಣ ಹುಡಿಗ್ಯಾರಿಗಿ ಸಾಲ್ಯಾಕಂತ
ಅಜ್ಜನ ಒದರ್ಯಾಟ
ಗಂಡೂ ಹೆಣ್ಣೂ ಏಕಾಗಿ ಎಲ್ಲ
ಆಡತಾವ ಆಟ. [೩೪]

ಹೆಣ್ಣು–ಗಂಡಿನ ಸಮಾನತೆಯನ್ನು ತಡೆಯುವ ಪ್ರಯತ್ನ ಅಜ್ಜನದು. ಅವನಿಗೆ ಮೊಮ್ಮಗಳ ವರ್ತನೆಯಲ್ಲಿ ಸಂದೇಹವೇ ಸಂದೇಹ.

ತಂದಿಗಿ ಬೈತಾನ ಹೆಸರ ಹಚ್ಚಿದಿ
ಸಾಲಿಗಿ ಓಡ್ಯಾಡಿ
ಸದರ ಕೊಟ್ಟ ಮಗಳsನ ಏರಿಸಿದಿ
ನೀನು ಬುದ್ಧಿಗೇಡಿ
ನನಗ ಅನುಮಾನ ಹುಶಾರ ಕೈಗೆ
ಹತ್ತಾಕಿಲ್ಲ ಹುಡುಗಿ
ನಡುವ ತಾಯಿ ಬಾಯಿ ಹಾಕಿದರ
ಬಂತ ದೊಡ್ಡ ಬಡಿಗಿ. [೩೫]

ಅಜ್ಜನಿಗಿರುವಷ್ಟು ಸಾಂಪ್ರದಾಯಿಕ ಕುರುಡತನ ತಂದೆಗಿಲ್ಲದಿರುವುದೇ ಮಗಳ ಸಮಾದಾನ.

ಅಜ್ಜನ ಎದುರು ತಂದಿ ತಾಕೀತ
ಕಾಯಿ ನಮ್ಮ ಅಬರು
ಹೊರಗ ತಂದಿ ಕಣ್ಣ ಚಿವುಟತಾನ
ಹಳ್ಳಿ ಜನಾ ಅವರು. [೩೬]

ಅಜ್ಜನಂತೆ ತಂದೆಗೂ ಅವಳ ಶೀಲದ ಪ್ರಶ್ನೆಯೇ ಮುಖ್ಯವಾಗಿದೆ. ಡಾ. ಇಟ್ಟಣ್ಣವರ ಕೂಡ ಅದನ್ನೇ ಬೆಂಬಲಿಸುತ್ತಾರೆ.

---

೩೩. ಅದೇ. ಪುಟ–೨೧
೩೪. ಅಜ್ಜ ಕಾಡತಾನು : ಗಾಲಿ ಉಳ್ಳತ್ಯೆತಿ : ಪುಟ–೩
೩೫. ಅದೇ. ಪುಟ–೪, ೫.
೩೬. ಅದೇ, ಪುಟ–೫

ಆದರೂ ಅದರಾಗ ಅರತ ಇರತ್ರೈತಿ
ತಿಳದ ನೋಡಬಹುದು
ಹಳ್ಳ ಬಾಂವಿಗೂ ಪಂಪ ಕೂಡ್ರಿಸಿ
ತ್ವಾಟಾ ಮಾಡಬಹುದು. [೩೭]

ಹಳೆಯ ಬಾವಿಗೆ ಪಂಪು ಕೂಡ್ರಿಸುವ ಲೆಕ್ಕಾಚಾರ ಇಟ್ಟಣ್ಣವರದು. ಇವರದು ಸಮನ್ವಯ ಮನೋಧರ್ಮ. ಹೆಣ್ಣು ಮಕ್ಕಳಿಗೆ ಶಿಕ್ಷಣದ ಅಗತ್ಯ ಪ್ರತಿಪಾದಿಸುತ್ತಲೇ ಶೀಲದ ಪ್ರಾಮುಖ್ಯತೆಯನ್ನು ಒಪ್ಪುತ್ತಾರೆ. ಪುರುಷ ಪ್ರಧಾನ ನೆಲೆಯಲ್ಲಿಯೇ ಪ್ರತಿಕ್ರಿಯಿಸುತ್ತಾರೆ.

ಸಾಂಪ್ರದಾಯಿಕ ಹಾಗೂ ವೈಚಾರಿಕ ಸಂಘರ್ಷವನ್ನು ಹಾಸ್ಯಮಯವಾಗಿ ಬಣ್ಣಿಸುವ ಕವಿತೆ 'ಇರಬೇಕೇನೋ ಬ್ಯಾನಿ' ವರದಕ್ಷಿಣೆ ತೆಗೆದುಕೊಳ್ಳದೆ ಬಡವರ ಹುಡುಗಿಯನ್ನು ಮದುವೆಯಾದ ಪ್ರಗತಿಪರ ಚಿಂತನೆಯ ಹುಡುಗನೊಬ್ಬನ ಫಜೀತಿಯಿದು –

ಏಟು ಏಟು ವರದಕ್ಷಿಣಿ ಬ್ಯಾಡಂತ
ಮದಿವಿ ಮಾಡಿಕೊನ್ನಿ
ಹೇಂತಿ ಊರಗೆಲ್ಲಾ ಪೂರಽ ಸುದ್ದಿ
ಇರಬೇಕೇನೋ ಬ್ಯಾನಿ. [೩೮]

ವರದಕ್ಷಿಣೆ ಪಡೆಯದಿದ್ದರೆ ಹಳ್ಳಿಗರಿಗೆ ಎಂಥದೋ ಸಂಶಯ. ಹಳ್ಳಿ ಜನರು ಸುದ್ದಿ ಹಬ್ಬಿಸುವುದರಲ್ಲಿ ನಿಸ್ಸೀಮರು –

ಜನಾ ಅಸನರಿ ಅಲ್ಲ ತಗಿಽತಾರ
ಉಸಕ ಹಿಂಡಿ ಎಣ್ಣಿ
ಬೇಕಾದ ತಿಳದ ಬಲ್ಲಾಂಗ ಮಾತಾಡ್ತಾರ
ಇಲ್ಲ ಹಗ್ಗ ಕಣ್ಣಿ. [೩೯]

ಬೀಗರು–ಬಿಜ್ಜರು, ನೆರೆಮನೆಯವರು, ಗೆಳೆಯರು ಎಲ್ಲರೂ ಒಂದೊಂದು ರೀತಿ ತರ್ಕಿಸುತ್ತಾರೆ. ಯಾರಿಗೂ ಹುಡುಗನ ಆದರ್ಶ ನೆನಪಾಗುವುದಿಲ್ಲ. ಹೆಂಡತಿಗೂ ಕೂಡ.

ಪೂರ ಸಂಸೆ ಇಟಗೊಂಡ ಹಗಲೆಲ್ಲ
ಕೇಳತಾಳ ನನ್ಹೇಂತಿ.
ರೊಕ್ಕ ಇಲ್ಲದೆ ಆದಿರ್ರ್ಯಾಂಗ
ನಿಮಗೇನ ಊನ ಐತಿ. [೪೦]

---

೩೭. ಅದೇ.
೩೮. ಇರಬೇಕೇನೋ ಬ್ಯಾನಿ : ಗಾಲಿ ಉಳ್ಳತ್ತೈತಿ : ಪುಟ–೪೪
೩೯. ಅದೇ.
೪೦. ಅದೇ.

ಹಳ್ಳಿಗಳಲ್ಲಿ ಜಿಡ್ಡುಗಟ್ಟಿದ ಸಾಂಪ್ರದಾಯಿಕತೆಯನ್ನು ಕಿತ್ತು ಹಾಕುವುದು ಸುಲಭವಲ್ಲ. ಅವರಿಗೆ ಹೊಸತು ವಿಚಾರಗಳೆಂದರೆ ವಾತ್ಸಾರ. ಮಹಿಳೆಯರನ್ನು ಹೊಸ್ತಿಲೊಳಗೇ ಬಂಧಿಸುವ ಚಪಲ. ಹಳ್ಳಿಗಳನ್ನು ಸುತ್ತುವರೆದ ಜಾತಿಯ ಮುಳ್ಳುಬೇಲಿ ಇನ್ನೂ ಹೆಚ್ಚು ಅಪಾಯಕಾರಿ. ಒಮ್ಮೊಮ್ಮೆ ನಾಡಿಗಿಂತಲೂ ಕಾಡು ಒಳ್ಳಿತು. ಆದ್ದರಿಂದಲೇ ಪ್ರೇಮಿಗಳಿಗೆ ಕಾಡುಪ್ರಿಯವಾಗುತ್ತದೆ. ಅಲ್ಲಿ ಪ್ರೀತಿಗೆ ಅರ್ಥವಿಲ್ಲ ; ರೀತಿಯೇ ಪ್ರಧಾನ.

**ಮುದುಕರಿಗೆಲ್ಲಾ ಮೂರದ್ದೇಲಿ**
**ಪ್ರೀತಿ ಕಿಮ್ಮತ್ತಾ.** ೪೧

ಡಾ. ಇಟ್ಟಣ್ಣವರಿಗೆ ಹಳ್ಳಿಯ ಒಲವಿದೆ, ಅಲ್ಲಿಯ ಸಹಬಾಳ್ವೆಯಲ್ಲಿ ಅಪಾರ ವಿಶ್ವಾಸವಿದೆ, ದುಡಿಮೆಯಲ್ಲಿ ಗೌರವವಿದೆ, ಬದುಕಿನಲ್ಲಿ ನಂಬಿಗೆಯಿದೆ. ಅವರ ಕಾವ್ಯ ರೈತ ಮಕ್ಕಳ ಹಾಡು –

**ರೈತ ಮಕ್ಕಳು ಕೂಡಿ**
**ಬಾಳಿಸ್ವಾಡಾ ಹಾಡಿ**
**ಸಾಗೋಣು ಬಾಳೆಯ ಬನದಾಗ;**
**ನಮ್ಮ ನಿಮ್ಮ ಪ್ರೀತಿ**
**ಚೆಂದಾಗಿ ಸಾಗಲಿ**
**ಹಿರಿಹೊಳಿ ತುಂಬಿ ಹರದ್ಹಾಂಗ.** ೪೨

ಇಂಥ ಹಳ್ಳಿಯ ಒಡಲೊಳಗಿನ ಪ್ರಗತಿ ವಿರೋಧಿ ಸಾಮಾಜಿಕ ನೆಲೆಗಳನ್ನು ಇಟ್ಟಣ್ಣವರ ಕಾವ್ಯ ಗುರುತಿಸಿ, ತೀಕ್ಷ್ಣವಾಗಿ ಪ್ರತಿಕ್ರಿಯಿಸುತ್ತದೆ. ಈ ತಾತ್ವಿಕ ಚಿಂತನೆಯಿಂದ ಅವರ ಕಾವ್ಯದ ಓದು ಮುಖ್ಯವಾಗುತ್ತದೆ.

---

೪೧. ಗರದಿ ಗಮ್ಮತ್ತ : ಹೊಳಿ ಸಾಲ ಬಳ್ಳಿ : ಪುಟ–೨
೪೨. ಭೂಮಿತಾಯಿ ಸಾಕ : ಹೊಳಿ ಸಾಲ ಬಳ್ಳಿ : ಪುಟ–೧೧

# ಅಧ್ಯಾಯ – ೫

## ಇಟ್ಟಣ್ಣವರ ಕಾವ್ಯ ವಿಶ್ಲೇಷಣೆ–೨ : ಸಾಂಸ್ಕೃತಿಕ ಘರ್ಷಣ

ಇಟ್ಟಣ್ಣವರ 'ಹೊಳಿಸಾಲ ಬಳ್ಳಿ'ಯ ಹೂವು ಪ್ರೇಮ ಸ್ಪಂದನಗಳು, ಹಣ್ಣು ಸಾಂಸ್ಥಿಕ ಒತ್ತಡಗಳು, ಬೀಜ ಸಾಂಸ್ಕೃತಿಕ ತುಡಿತಗಳು. ಇವು ಬೆಳಕು ಬಿತ್ತಿ, ಬೆಳಕು ಬೆಳೆದು, ಬೆಳಕು ಹರಡುವ ಬೆಳಕಿನ ಹಾಡಿನ ಒಲಸೆಳಕುಗಳು, ಕಾವ್ಯದ ಸಾಫಲ್ಯ ಇರುವುದೇ ಇಂಥ ಬೆಳಕಿನಲ್ಲಿ, ಬೆಳಕಿನೊಳಗಣ ಬೆಳಕಿನ ಅವಲೋಕನದ ಪ್ರಯತ್ನ ಇಲ್ಲಿದೆ.

ಸಾಮಾಜಿಕ ಒತ್ತಡದೊಂದಿಗೆ ಸಾಂಸ್ಕೃತಿಕ ತುಡಿತಗಳು ಕಾವ್ಯದಲ್ಲಿ ಒಡಮೂಡುತ್ತವೆ. ನಗರೀಕರಣದ ಒತ್ತಡದಲ್ಲಿ ಮನುಷ್ಯ ಸಂಬಂಧದ ಎಳೆಗಳು ಹರಿದುಹೋಗುವಷ್ಟು ತೆಳ್ಳಗಾಗುತ್ತಿದ್ದರೆ ನಗರದ ಯಾಂತ್ರೀಕರಣ ಅಸ್ತಿತ್ವವನ್ನೇ ಕಸಿಯುತ್ತಿದೆ. ಸಹಜತೆ ಕಳೆಯುತ್ತಿದೆ. ಮನ ಮನಗಳಲ್ಲಿ ಕತ್ತಲೆ ತುಂಬುತ್ತಿರುವ ಸಾಂಪ್ರದಾಯಕ ಸಾಂಕ್ರಾಮಿಕ ರೋಗಗಳು ಮಾನವತೆ ಮುಕ್ಕುತ್ತಿವೆ. ಧರ್ಮಗಳು ಭಯೋತ್ಪಾದನೆಯ ಮೂಲಕ ನೆಮ್ಮದಿಯ ನೆಲೆಗಟ್ಟು ಸ್ಫೋಟಿಸುತ್ತಿವೆ. ಸ್ವಾರ್ಥ ಪ್ರೇರಿತ ರಾಜಕೀಯ ಪ್ರಜಾಸತ್ತೆಯ ಮೌಲ್ಯಗಳನ್ನು ಗೌಣಗೊಳಿಸುತ್ತಿದೆ. ನಮ್ಮ ಸಾಂಸ್ಕೃತಿಕ ಹಬ್ಬಗಳು ಅರ್ಥಕಳೆದುಕೊಂಡ ಆಚರಣೆಗಳು ಹತಾಶೆಯ ಇಂಥ ವಾತಾವರಣದಲ್ಲಿಯೂ ಸಾಂಸ್ಕೃತಿಕ ವ್ಯಕ್ತಿತ್ವದ ಹಣತೆಗಳಿರುವುದು ಮನುಕುಲದ ಆಶಾಕಿರಣ.

ಇಟ್ಟಣ್ಣವರ ಕಾವ್ಯದ ಸಾಂಸ್ಕೃತಿಕ ಅವಲೋಕನಕ್ಕೆ ಈ ಪ್ರವೇಶಗಳನ್ನು ರೂಪಿಸಿಕೊಳ್ಳಬಹುದು.

೧. **ಆಂತರಿಕ ವೈರುಧ್ಯಗಳು**

೨. **ಧರ್ಮ ಜಿಜ್ಞಾಸೆ**

೩. **ಸಾಂಸ್ಕೃತಿಕ ಹಣತೆಗಳು**

### ೫.೧. ಆಂತರಿಕ ವೈರುಧ್ಯಗಳು :

ಪ್ರೀತಿ ಮನುಕುಲದ ಪರಿಮಳ. ಆದರೆ ಸಂಪ್ರದಾಯದ ಕೀಟಗಳು ದುಂಬಿಗಳಿಗೆ ಪರಿಮಳ ಉಣ್ಣಲು ಬಿಡುತ್ತಿಲ್ಲ. ಕೀಟಗಳಿಗೆ ಪರಿಮಳದ ಆಸ್ವಾದನೆ ಗೊತ್ತಿಲ್ಲ. ಅವುಗಳಿಗೆ ವಸ್ತು ಮುಖ್ಯ; ಭಾವ ಅಮುಖ್ಯ. ಕಾಡಿನಿಂದ ನಾಡಿಗೆ ಬಂದ ಸಂಸ್ಕೃತಿ ಮತ್ತೆ ಕಾಡಿನೆಡೆಗೆ ಮುಖಮಾಡಿರುವ ವೈರುಧ್ಯತೆ ಇಟ್ಟಣ್ಣವರ ಅನೇಕ ಕವಿತೆಗಳಲ್ಲಿದೆ.

ಗ್ರಾಮೀಣ ಪ್ರದೇಶದ ಮನಸ್ಸುಗಳು ಜಾತಿವಾದಿಗಳ ಕಾಟಕ್ಕೆ ಬೇಸತ್ತು ಕಾಡಿಗೆ ಓಡಿದರೆ ನಗರವಾಸಿಗಳಿಗೆ ಯಾಂತ್ರಿಕ ಕರ್ಷಣ ಸಾಕಾಗಿದೆ. ಎಲ್ಲರ ಮುಖಗಳು ಈಗ ಕಾಡಿನೆಡೆಗೆ –

ಕೈಕೈ ಹಿಡದ ಎತ್ತರ ಬೆಟ್ಟದ
ನೆತ್ತಿ ಏರೂಣು
ಹೆಜ್ಜಿ ಗಟ್ಟ್ಯಾಂಗ ಊರೂಣು
ಒಬ್ಬರಿಗೊಬ್ಬರ ಬೀಳದ್ಹಂಗ
ಆಸರಾಗೂಣು
ಮ್ಯಾಗ ಹಕ್ಯಾಗಿ ಹಾರೂಣು. ೧

ಭಾರತೀಯ ಸಮಾಜದ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಈ ಕವಿತೆಗಳು ಸೂಕ್ಷ್ಮವಾಗಿ ಪರಿಶೀಲಿಸುತ್ತವೆ. ನಗರ ಹಾಗೂ ಗ್ರಾಮಗಳ ಸಾಂಸ್ಕೃತಿಕ ತುಡಿತಗಳು ವಿಭಿನ್ನ. ಪ್ರೇಮದ ಹಾಡು ಕವನ ಸಂಕಲನದ 'ಹಳ್ಯಾಕಿ' ಕವಿತೆ ಆ ತುಡಿತಗಳನ್ನು ಮುಖಾಮುಖಿಯಾಗಿಸುತ್ತದೆ.

ನನ್ನವರು ಮಾಸ್ತರ
ದೊಡ್ಡs ಕಾಲೇಜ ಸsರ
ಮದಿವ್ಯಾಗಿ ಬಂದsನ ಹಳ್ಯಾಕಿ
ಕಳದರೂ ವರಸ್ಹತ್ತ
ಹೇಳಿಸಿಕೊಳ್ಳುದಾತ
ಇನ್ನು ಬಂದಿಲ್ಲಂತ ತಿಳವಳಿಕಿ. ೨

ಪಟ್ಟಣದ ವಿದ್ಯಾವಂತನನ್ನು ಮದುವೆಯಾದ ಹಳ್ಳಿಯ ಮುಗ್ಧೆಯೊಬ್ಬಳ ಸಾಂಸ್ಕೃತಿಕ ತಳಮಳಗಳು ಪ್ರಸ್ತುತ ಕವನದಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ಮದುವೆಯ ಮೊದಲು ಪಟ್ಟಣದ ಕುರಿತು ಅವಳ ಕಲ್ಪನೆಯೇ ಬೇರೆಯಾಗಿತ್ತು. ನಗರದ ಭ್ರಮೆಗಳೆಲ್ಲ ಕರಗಿದವು.

ಹಿಗ್ಗಿಲ್ಲ ಹೌಸಿಲ್ಲ
ಇಬ್ಬರಿಗೂ ಕಿರಿಕಿರಿ
ಪ್ಯಾಟ್ಯಾಕಿನಾದರ ಬೇಸಿತ್ತ. ೩

–ಎಂದು ಗಂಡ ಹಳಹಳಿಸಿದರೆ ಹೆಂಡತಿಗೆ ಬಾಲ್ಯದ .ನೆನಮುಗಳು ಹಿಂಡು ಹಿಂಡಾಗಿ ಬೆನ್ನಟ್ಟಿವೆ –

ಹಿಗ್ಗಿನ ಹೊಳಿದಂಡಿ
ಓಡು ಕೊಲ್ಲಾರ ಬಂಡಿ
ನೆನಪಿsಗಿ ನನ್ನೆದಿ ತೋಡsತತಿ
ತೌರಾಗ ನನಜೋಡ

---

೧. ಹಾಡುಣು ಬಾರs ಪ್ರೇಮದ ಹಾಡಾ : ಹಾಡುಣು ಬಾರs ಪ್ರೇಮದ ಹಾಡಾ : ಪುಟ–೨
೨. ಹಳ್ಯಾಕಿ : ಹಾಡುಣು ಬಾರs ಪ್ರೇಮದ ಹಾಡಾ : ಪುಟ–೧೧
೩. ಅದೇ : ಪುಟ–೧೨

**ಮೂಡು ಕೆಂಪಿನಗೂಡ**

**ಕೂಗು ಕೋಗಿಲ ನೆನಪ ಕಾಡsತತಿ.** [೪]

ಇಲ್ಲಿ ಎರಡು ಹೂವುಗಳಿವೆ. ಒಂದು ತೋಟದ ಹೂವು, ಮತ್ತೊಂದು ಕಾಗದದ ಹೂವು ಕವಿಯ ಒಲವು ಹಳ್ಳಿಗೆ ಹರಿಯುವುದರಿಂದ ಅವರು ಪಟ್ಟಣವನ್ನು ಕಾಗದದ ಹೂವಿನಲ್ಲಿ ಸಂಕೇತಿಸುತ್ತಾರೆ. ವಸ್ತುಸ್ಥಿತಿಗಿಂತ ಮನಸ್ಸಿನ ಸಾಂಸ್ಕೃತಿಕ ತುಡಿತಗಳೇ ಪ್ರಮುಖವಾಗುತ್ತವೆ.

ಗ್ರಾಮೀಣ ಪ್ರದೇಶದ ಸಾಂಸ್ಕೃತಿಕ ಕ್ಷೇತ್ರದ ತುಂಬ ಭೇದದ ಮುಳ್ಳುಗಳು ಕಾಣದಂತೆ ಹರಡಿಕೊಂಡಿವೆ. ಹಳ್ಳಿಗಳು ಭೇದ ಸಂಸ್ಕೃತಿಯ ಕಳ್ಳಿಗಳು, ಕಂದಾಚಾರದ ಕುಳ್ಳಿಗಳು, ಮೌಢ್ಯದ ಕಣಜಗಳು ಅಲ್ಲಿ ಅಂತರ್ಜಾತಿ ವಿವಾಹ ಕ್ರಾಂತಿಗೆ ಸಮಾನ. ಅಲ್ಲಿ ಜಾತಿಯ ಎದುರು ಪ್ರೀತಿ ಗೌಣ. ಆದುದರಿಂದ ಕವಿ ಇಟ್ಟಣ್ಣವರ ಕಾವ್ಯ ಹಳ್ಳಿಗಳಲ್ಲಿಯ ಭೇದ ಅಳಿಸಿ ಸಾಂಸ್ಕೃತಿಕ ಸಾಮರಸ್ಯ ಸಾಧಿಸಲು ಪ್ರಯತ್ನಿಸುತ್ತದೆ.

**ಭೇದ ತೋರದ ನೀರ ಕೊಡತೈತಿ**
**ಹೋಳಿ ಹರದ ಬಂದ**
**ಅದs ಸದ್ಬುದ್ಧಿ ನಮಗೆಲ್ಲಾರಿಗೂ**
**ಬೇಕೊ ಅಣ್ಣಾ ಇಂದ**
**ಅಜ್ಜಾ ಅಜ್ಜಿ ಕಟ್ಟಿದ ಜಾತಿs**
**ಕ್ವಾಟೆ ಹಾರೂಣು**
**ಸಿಟ್ಟಿಲೆ ಅವರು ಜಜ್ಜಿದರೂನು**
**ಪ್ರೀತಿ ತೋರ್‍ಲೂಣು.** [೫]

ಹಳ್ಳಿಯ ಭೇದಕ್ಕೆ ಕವಿಯ ಸಾಂಸ್ಕೃತಿಕ ಪ್ರತಿಭಟನೆಯಿದು. ಡಾ. ಶ್ರೀರಾಮ ಇಟ್ಟಣ್ಣವರ ಸಾಂಸ್ಕೃತಿಕ ಕ್ರಾಂತಿಗೆ ಕರೆಕೊಡುತ್ತಾರೆ. ಪ್ರೀತಿಯೇ ಅವರ ಪ್ರತಿಭಟನೆಯ ಅಸ್ತ್ರ. ಅವರ ಕಾವ್ಯದುದ್ದಕ್ಕೂ ಈ ಗಾಂಧಿವಾದ ವಿವಿಧ ರೂಪಗಳಲ್ಲಿ ಮುಖದೋರುತ್ತದೆ.

ಜಾನಪದ ಮನಸ್ಸು ಅವಿಭಕ್ತ ಕುಟುಂಬದೆಡೆಗೆ ಹರಿಯುವುದು–ಸಹಜ. ಕುಟುಂಬದ ವಿಭಜನೆಯನ್ನು ಕವಿ ವಿರೋಧಿಸುವರು. ಅವರದು ಕೊಡೆಯ ಕಲ್ಪನೆ. ಕುಟುಂಬದ ವಿಭಜನೆಗೆ ಹಲವು ಕಾರಣಗಳಿರಬಹುದು. ಸೊಸೆ ಬಂದ ಮೇಲೆ ಮಗ ಬೇರೆ ಮನೆಮಾಡುವ ಕವಿತೆಯಲ್ಲಿ ಕುಟುಂಬ ಸ್ಫೋಟದ ಕಾರಣವನ್ನು ಹೆಣ್ಣಿನಲ್ಲಿಯೇ ಹುಡುಕಲಾಗಿದೆ. ಆದರೆ ಮತ್ತೊಂದು ಕವಿತೆಯಲ್ಲಿ ಹೆಂಡತಿಯೊಂದಿಗೆ ಹೊಂದಿಕೊಳ್ಳದ ಮಗನನ್ನು ತಾಯಿಯೇ ಹೊಂದಿಸುತ್ತಾಳೆ. ಕವಿ ಇಟ್ಟಣ್ಣವರ ಪುರುಷ ಪ್ರಧಾನ ನೆಲೆಯಲ್ಲಿ ನಿಂತೇ ಸಾಂಸ್ಕೃತಿಕ ಚಿಂತನೆ ಆರಂಭಿಸಿದರೂ ಅದನ್ನು ಸಾರಾಸಗಟಾಗಿ ಒಪ್ಪಿಕೊಳ್ಳದಿರುವುದು ವಿಶೇಷ. ಶೀಲದ ವಿಷಯದಲ್ಲಿ ಈ ಕವಿ ಅಪ್ಪಟ ಸಂಪ್ರದಾಯವಾದಿ. ಶೀಲದ ಅಳತೆಯಿಂದಲೇ 'ಮಾನ' ಅಳೆಯುತ್ತಾರೆ. ಹೆಣ್ಣಿಗೆ ಶೀಲದ ಮೂಗುದಾರ ಹಾಕಿ, ಗಂಡನ್ನು ಹಾಗೇ

---

೪. ಅದೇ.

೫. ಮುಗಿಲಾಗಿನ ಮೋಡ : ಗಾಲಿ ಉಳ್ಳತೈತಿ : ಪುಟ-೨೭, ೨೮

ಬಿಡುವುದಿಲ್ಲ. ಸಂಸಾರದ ಜತ್ತಿಗೆ ಇಬ್ಬರಿಗೂ ಶೀಲ ಅಗತ್ಯವೆಂದು ವಾದಿಸುತ್ತಾರೆ.

'ಚಂದ್ರ ನಮ್ಮೊಡನಿದ್ದಾನೆ' ಕವನ ನಮ್ಮ ಸಾಂಸ್ಕೃತಿಕ ದಿವಾಳಿತನದ ತೀಕ್ಷ್ಣ ವಿಡಂಬನೆ. ಸಂಸಾರಕ್ಕೂ ತ್ಯಾಗ ಮಾಡದ ಭೋಗ ಜೀವನದ ಲಾಲಸೆಯನ್ನು ಕವಿ ನಯವಾಗಿ ಮೂದಲಿಸುವವರು. ಭೋಗದ ವೈರುಧ್ಯಕ್ಕೆ ಚಂದ್ರ ಸಾಕ್ಷಿಯಾಗಿ ಮಕ್ಕಳ ನ್ಯಾಯಾಲಯದಲ್ಲಿ ಸತ್ಯ ಸ್ಫೋಟಿಸುತ್ತಾನೆ. ನಗರೀಕರಣದ ಯಾಂತ್ರಿಕತೆಯಲ್ಲಿ ನಮಗೆ ಮಕ್ಕಳಲ್ಲಿಯೂ ಮಮತೆಯಿಲ್ಲ. ಕಾರು–ಬಾರು–ಬೀರು–ಚೆಲುರುಗಳ ಮಧ್ಯೆದಲ್ಲಿ ಹೂತು ಹೋಗಿದ್ದೇವೆ. ಹೆಂಡದಂಗಡಿ ಮುಂದೆ ಗಂಟೆಗಟ್ಟಲೆ ಕ್ಯೂ ನಿಲ್ಲುವ ನಮಗೆ ಮಕ್ಕಳೊಂದಿಗೆ ಬೆರೆಯಲು ಸಮಯ ಸಿಗುತ್ತಿಲ್ಲ. ನಾವೆಲ್ಲರೂ ಭೋಗದ ಅಮಲಿನಲ್ಲಿದ್ದೇವೆ.

**ತಣ್ಣಗೆ ನಿಂತಿದ್ದೇವೆ ನೋಡುತ್ತ**
**ರಾಮರಾಜ್ಯದ ಬಾಗಿಲಲ್ಲಿ**
**ಕಲ್ಪನೆಯ ಗೆರೆತುಳಿದು.**
**ಆ ಕಡೆಗೆ ಬಲಿ ಬೇಡುವ ನಕ್ಷತ್ರಲೋಕ**
**ಈ ಕಡೆಗೆ ಸಾಯುತ್ತಿರುವ ದೇಶ**
**ಸೂರ್ಯನನು ಮರೆಮಾಚಿ**
**ಬದುಕು ಎಲ್ಲಿಯವರೆಗೆ ?** [೬]

ಈ ಪ್ರಶ್ನೆ ಕಾವ್ಯದಲ್ಲಿ ಮತ್ತೆ ಮತ್ತೆ ತರಂಗಿಸುತ್ತದೆ.

'ಶಾಂತಿವಾದ' ಈ ಕವಿಯ ಸಾಂಸ್ಕೃತಿಕ ಚಿಂತನೆಯ ನವನೀತ. ಅವರಿಗೆ ಬೇಕಾಗಿರುವುದು ಗಾಂಧೀಜಿ ಪ್ರಣೀತ ಶಾಂತಿವಾದ.

**ಹಿಂದಿನ ಹಿರಿಯಾರ ಶಕ್ತಿಯ ಮ್ಯಾಲs ನಿಂತವಪ್ಪ ಇಂದ**
**ಕಲಕದ್ಹಾಂಗ ತಿಳಿ ನೀರಿನ ಕೆರಿಯ ಕುಡಿಯಬೇಕ ಮುಂದ**
**ಉಪವಾಸ ಮಾಡಿ ಸಾಯತನನ್ನು ಗಾಂಧಿ ಇಲ್ಲೋ ಇಂದ**
**ಅವನ ಆತ್ಮದ ಬೆಳಕಿನ ಒಳಗ ಬಾಳುಣಣ್ಣ ಚಂದ.** [೭]

ಡಾ. ಇಟ್ಟಣ್ಣವರ ಕಾವ್ಯದ ಸಾಂಸ್ಕೃತಿಕ ಕಾಳಜಿಯ ಹಿಂದಿನ ಶಕ್ತಿ ಗಾಂಧೀಜಿ. ಗಲಭೆ–ಯುದ್ಧದಂಥ ಸಾಂಸ್ಕೃತಿಕ ತಲ್ಲಣಗಳು ಉಂಟಾದಾಗ ಇವರ ಕಾವ್ಯ ಹಿಂಸೆಯ ಪ್ರತಿಭಟನೆಗೆಂದೇ ಸೆಟೆದು ನಿಲ್ಲುತ್ತದೆ. ಪ್ರೇಮದ ಬಿಳಿ ಪಾರಿವಾಳ ಹಾರಿಸುತ್ತದೆ – .

**ಕಲಬೇರಿಕಾಗಿರು ಮನಸಿನ ಜಾಲಾ**
**ಕೊಂದ ಕೂಗುವ ಮರಣದ ಮೂಲಾ**
**ಅಂತ ತಿsಳಿದ ಹರಿಯೂ ಕಾಲಾ**

೬. ಕರೆಗಂಟೆ : ಹೊತ್ತು ಮೂಡುವ ಸಮಯ : ಪುಟ–೧೦
೭. ಹಾರ್ಲೋಣು ಬರ್ರಿ ಬಿಳಿ ಪಾರಿವಾಳಾ : ಹೊತ್ತು ಮೂಡುವ ಸಮಯ : ಪುಟ–೧೬

ಬಲ್ಲಿದ ಮನಸ್ಯಾಗ ತಂದಾವ ಸೋಲಾ
ನೆಲಿಯು ತೋರದ ಸೃಷ್ಟಿಯ ಸೆರಗಾ
ಆದರೂ ಬದುಕುವ ಭಾವದ ಬುರಗಾ
............................ ಮನಕ ಮುಟ್ಟೈತೈತಿ
ಆಗ ಕವಿತಾ ಹುಟ್ಟೈತೈತಿ. [೮]

ನಮ್ಮ ಸಾಂಸ್ಕೃತಿಕ ಹಬ್ಬಗಳು ಅರ್ಥಹೀನ ಆಚರಣೆಗಳಾಗುತ್ತವೆ. ಯುಗಾದಿ, ಪಂಚಮಿ, ದೀಪಾವಳಿ ಮುಂತಾದವು ಸಂಭ್ರಮೋಲ್ಲಾಸ ತರುತ್ತಿಲ್ಲ. ಒತ್ತಡಗಳ ಮಧ್ಯೆ ಯುಗಾದಿ ಬೇವು-ಬೆಲ್ಲ ಮರೆತಿದೆ. ಪಂಚಮಿ ಜೋಕಾಲಿ ಜೀಕುತ್ತಿಲ್ಲ. ದೀಪಾವಳಿ ದೀಪಗಳು ಹೊತ್ತುತ್ತಿಲ್ಲ.

ಯುಗಾದಿ ಬರತತಿ ಸರಸರ ಬೀದ್ಯಾಗ
ಅವಸರ ಮನಿಯಾಗ
ಮತ್ತ ಯುಗಾದಿ ಮರಳಿ ಹೋಗತತಿ
ಒಣಗಿದ ಬನದಾಗ. [೯]

ಯುಗಾದಿ ಬಂದರೂ ಬಾಗಿಲಿಗೆ ಮಾವಿನ ಚಿಗುರಿನ ತೋರಣವಿಲ್ಲ. ಬದಲಿಗೆ ಪ್ಲಾಸ್ಟಿಕ್ ತೋರಣ ನೇಣು ಬಿದ್ದಿದೆ. ಬೆಲ್ಲ ತುಟ್ಟಿ ; ಬೇವು ಕಹಿ. ಹಬ್ಬವೆಂದರೆ ರಗಳೆ. 'ಹೊಳಿಸಾಲ ಬಳ್ಳಿ'ಯಲ್ಲಿಯ 'ಸಂಕ್ರಾಂತಿ'ಗೂ 'ಗಾಲಿ ಉಳ್ಳತೈತಿ' ಸಂಕಲನದಲ್ಲಿಯ 'ಯುಗಾದಿಗೂ'. ಇರುವ ವೈರುಧ್ಯ ಗಮನಿಸಬೇಕು. ಆ 'ಸಂಕ್ರಾಂತಿ'ಯಲ್ಲಿ ಸಡಗರವಿತ್ತು. ಎಳ್ಳು-ಬೆಲ್ಲ ತಿಂದು ಬದುಕು ಗೆಲ್ಲುವ ಆಶೆಯಿತ್ತು –

ಸವಿಮಾತಿನೊಳಗ ಸವಿ ನಡತಿ ಕೂಡಿ
ಆಗೇತಿ ಎಳ್ಳು-ಬೆಲ್ಲಾ;
ಎರಡು ತಿಂದ ನಾವಿಂದ ಹಾಡಿ
ಗೆದಿಬೇಕ ಬದಕ ಎಲ್ಲಾ. [೧೦]

ಹಿರಿಹೊಳೆಯ ಸ್ನಾನ, ಎತ್ತಿನ ಕೊರಳ ಗೆಜ್ಜೆಯ ನಾದ, ಹಕ್ಕಿ ಬಳಗದ ಹಾಡು, ಗೋದಿ ಉಮ್ಮಗಿ ಸಿಹಿ ಸಂಕ್ರಮಣದ ವಿಶೇಷಗಳು,

ಎಳ್ಳ ಹಚ್ಚಿದ ಸಜ್ಜರೊಟ್ಟಿ ಕೆನಿಮೊಸರ
ಬೆಣ್ಣಿ ಮುದ್ದಿ
ಮ್ಯಾಗ ಹೋಳಿಗೆ ಹೊಡದ ಏಳತಾರ
ಕ್ಯಾರಿಮೀಸಿ ತಿದ್ದಿ. [೧೧]

೮. ಯುಗಾದಿ ಬಂದೈತಿ : ಗಾಲಿ ಉಳ್ಳತೈತಿ : ಪುಟ-೨೬
೯. ಯುಗಾದೊ ಬಂದೈತಿ : ಗಾಲಿ ಉಳ್ಳತೈತಿ : ಪುಟ-೨೬
೧೦. ಸಂಕ್ರಾಂತಿ : ಹೊಳಿಸಾಲ ಬಳ್ಳಿ : ಪುಟ-೨೦
೧೧. ಅದೇ.

'ಹೊಳಿಸಾಲ ಬಳ್ಳಿ'ಯ 'ಪಂಚಮಿ'ಯಲ್ಲಿಯೂ ರಂಗು ತುಂಬಿತ್ತು. ಸುಖದ ಉಯ್ಯಾಲೆಯಲ್ಲಿ ಜೀಕುವ ಆ ಸಂಭ್ರಮದ ಗತ್ತು ಇಂದು ಉಳಿದಿಲ್ಲ. 'ಹೊತ್ತು ಮೂಡುವ ಸಮಯ' ಸಂಕಲನದ 'ಯುಗಾದಿ'ಯಂತೂ ನಮ್ಮ ಸಾಂಸ್ಕೃತಿಕ ದಿವಾಳಿತನದ ಯುಗಾದಿ.

**ಯುಗಾದಿ ಟೊಂಗ್ಯಾಗ ಹಾಡಹಾಡತಾವ**<br>
**ಹಕ್ಕಿ ಸೊರಾ ಎತ್ತಿ**<br>
**ಬೆಳಿಯೂ ಮನಸ್ಯಾ ಬರಬರತ ಸಣ್ಣಾಂವಾದ**<br>
**ಸೋಜಿಗನಸತ್ಯೆತಿ.** ೧೨

ಯುಗಾದಿಯ ಮರದ ರೆಂಬೆಯ ಮೇಲೆ ಕುಳಿತ ಹಕ್ಕಿಗಳು ಮನುಷ್ಯನ ಸಣ್ಣತನದ ಹಾಡು ಕಟ್ಟಿ ಹಾಡುವುದು ಅದ್ಭುತ ಕಲ್ಪನೆ. ಆ ಹಕ್ಕಿಗಳು ಮನುಷ್ಯನ ಹಿಂಸಾರತಿಯನ್ನು ಹಂಗಿಸಿ, ಹಾಡುತ್ತವೆ –

**ಚಿಗರ ಹಾಕಿ ಮಕ್ಕಳನ ಸಾಕತಿವ**<br>
**ಕಟ್ಟಿ ಚೆಂದಗೂಡ**<br>
**ಅದಃ ಗೂಡಿನ್ಯಾಗ ಕೂಡಿ ಮಲಗತಿವ**<br>
**ಬಂಧು ಬಳಗ ಜೋಡ**<br>
**ಬಂದೂಕ ಹಿಡಕೊಂಡ ಮನಶಾ ತಿರಗತಾನ**<br>
**ಹುಡುಕಿ ಹಕ್ಕಿ ಹಿಂಡ**<br>
**ಹಲ್ಲ ಕಡಿಃತಾನ ಜೀವ ಹೊಡಿಃತಾನ**<br>
**ಹಾಕಿ ಸಾಲಗುಂಡ.** ೧೩

ಕಾಲದ ಪಲ್ಲಟವನ್ನು ಕವಿ ಭೀಮ–ಬಕಾಸುರರ ಯುದ್ಧದಲ್ಲಿ ಸೂಚಿಸುವರು. "ಏನ ಮಾಡಿದರೂ ಉಪರಾಟಿ ಕಾಲ । ಭೀಮ ನೆಲಕ ಬಿದ್ದಾ ॥ ಮನಶಾನ ಮುರದ ಹೊಟ್ಟಿ ಹರದ । ಬಕಾಸೂರ ಗೆದ್ದಾ ॥" ಕಾಲ ಬದಲಾದರೂ ಕನಸುಗಳು ಸತ್ತಿಲ್ಲವೆಂಬುದೇ ಅಚ್ಚರಿ.

**ಆದರೂ ಹಾಡಿ ಎದರ ನೋಡತಿವ**<br>
**ಕನಸ ಕಾಳ ಮುಕ್ಕಿ**<br>
**ಬೆನ್ನ ಹಿಂದ ನಮುಗಾಸೆಯೊಂದ**<br>
**ಕಂಡೀತ ಬೆಳ್ಳಿ ಚಿಕ್ಕಿ.** ೧೪

'ಬೆಳ್ಳಿ' ಹೊಸ ಉದಯದ ಕನಸು. ಕವಿಯ ಆಶಾವಾದ. ಕವಿ ಇಟ್ಟಣ್ಣವರ ಆಶಾವಾದಿ. ಕರಾಳ ಕತ್ತಲೆಯಲ್ಲಿಯೂ ಬೆಳಕಿನ ಚುಕ್ಕೆಯೊಂದು ಮಿನುಗುವುದು ಅವರ ಕಾವ್ಯದ ಹಿರಿಮೆ.

ಮುಳುಗುವ ಸಂಜೆಗಳೆಲ್ಲ ಮೂಡುವ ಮುಂಜಾವುಗಳಾಗಬೇಕೆಂಬ ಅದಮ್ಯ ಹಂಬಲ.

---

೧೨. ಯುಗಾದಿ : ಹೊತ್ತು ಮೂಡುವ ಸಮಯ : ಪುಟ–೫೩

೧೩. ಅದೇ.

೧೪. ಅದೇ.

ಅವರು ಸಮುದಾಯದ ಸಾಂಸ್ಕೃತಿಕ ವೈರುಧ್ಯಗಳನ್ನು ಮಂಡಿಸುತ್ತ ನಿರಾಶೆಯ ಮಂಜಿನಲ್ಲಿಯೂ ಬೆಳ್ಳಿಚುಕ್ಕೆ ಮೂಡಿಸುತ್ತಾರೆ.

### ೫.೨. ಧರ್ಮ ಜಿಜ್ಞಾಸೆ :

ಒಂದು ಕಾಲದಲ್ಲಿ ಸಮುದಾಯದ ಬದುಕನ್ನು ಬೋಧಿಸಿದ ಧರ್ಮಗಳೇ ಇಂದು ಸಮುದಾಯವನ್ನು ಹೋಳಾಗಿಸುತ್ತಿವೆ. ಧರ್ಮದ ಮೂಲ ಪರಿಕಲ್ಪನೆ ಮರೆಯಾಗಿದೆ. ಗುಡಿಗಳು ಕೊಳಚೆಯಾಗಿವೆ. ದೇವರ ಹೆಸರಿನಲ್ಲಿ ನಡೆಯುವ ಜಾತ್ರೆಗಳು ವ್ಯಾಪಾರದ ಕೇಂದ್ರಗಳಾಗುತ್ತಿವೆ. ದಾರಿ ತಪ್ಪಿದ ಧರ್ಮದ ಪರಿಕಲ್ಪನೆ ದೇವರನ್ನೇ ಅಪಹರಿಸಿದೆ. ಕವಿ ದೇವರು-ಧರ್ಮ ಹುಡುಕುವುದು ಅನಿವಾರ್ಯವಾಗುತ್ತದೆ –

**ದೇವರೆಲ್ಲಿ ಏತಿ ತಮ್ಮಾ**
**ಧರ್ಮ ಎಲ್ಲಿ ಹೋತಿ ?**
**ಮೇದ ಕುರಿ ಕೋಳಿ ಕ್ವಾಣಿನ ಜೀವಾ**
**ಬೇಡತಾರ ದ್ಯಾಮವ್ ದುರಗವ್ವಾ**
**ಹಡದ ಮಕ್ಕಳನ್ನ ಕಡಿಸಿ ತಿನ್ನಾಕಿ**
**ದೇವರ್‍ವ್ಯಾಂಗ ಕೇಳ ಏನ ಅಂಜಿಕಿ**
**ಪಾಪ ಕಳಿsಬೇಕ ಥೂಥೂ ಉಗುಳಿ**
**ಬಂಡ ದೇವರಿಗಿನ್ನ ಬರಬೇಕ ಬಗಳಿ.** [೧೫]

ಹಿಂಸೆಯಲ್ಲಿ ದೇವರಿಲ್ಲ. ಪಾಪದ ಕಲ್ಪನೆ ಧರ್ಮವಲ್ಲ. ಪೂಜೆ ಪಾಪದ ಅನುಮತಿಯಲ್ಲಾ. "ನೂರಾಐದ ಮಹಾಮಂಗಳಾರತಿ । ದೇವರ್‍ಹೆಸರ ಮ್ಯಾಗ ನಡಿಸ್ಯಾರ ಸಂತಿ". ಮನಸ್ಸಿನ ಕೊಳೆ ತೊಳೆಯುವುದೇ ನಿಜವಾದ ಧರ್ಮ.

**ಬಿಟ್ಟ ಬಾಳುಣು ಜಿದ್ದಾ ವರಮಾ**
**ತೆಳಗ ಬಿದ್ದವನ ಎತ್ತುದು ಧರ್ಮಾ.** [೧೬]

ಮತ್ತೊಬ್ಬರ ಸುಖಕ್ಕಾಗಿ ಹರಿಸುವ ಬೆವರಿನ ಪ್ರೀತಿಯೇ ದೇವರು. ಧರ್ಮದ ಹೆಸರಿನಲ್ಲಿ ಬೂದಿ ಹಾರಿಸುವ, ಮಂತ್ರ ಉಗುಳುವ ಡಂಬಕರಿಂದ ನಮ್ಮ ಮಕ್ಕಳನ್ನು ದೂರಿಡಬೇಕೆಂದು ಕವಿ ಹೇಳುವರು.

**ಧರ್ಮ ಧರ್ಮ ಎಂದು**
**ಧರ್ಮ ಸೂರ್ಯನ ಮರೆಮಾಚಿ**
**ಬರಿಮಂತ್ರಗಳನ್ನೂದಿ**

---

೧೫. ದೇವರೆಲ್ಲಿ ಏತಿ : ಗಾಲಿ ಉಳ್ಳೃತಿ : ಪುಟ-೪೨

೧೬. ಅದೇ.

ಮುಖಕ್ಕೆ ಎಂಜಲು ಸಿಡಿಸುವ
ಧರ್ಮಗೊಡ್ಡುಗಳ ಕೈಗೆ
ನಮ್ಮ ಮಕ್ಕಳನ್ನು ಕೊಡುವುದು ಬೇಡ
ಇವರಿಂದ ಏನು ಆಗುವುದಿಲ್ಲ
ಇವರಿಗೆ ಏನು ಸಿಗುವುದಿಲ್ಲ. [೧೭]

–ಎಂದು ಸ್ಪಷ್ಟವಾಗಿ ಹೇಳುವರು. ಧರ್ಮವನ್ನು ಕಂದಾಚಾರದ ಅಂಗಡಿಯಾಗಿಸಿ ಬೂದಿ ಮಾರುವ ಮಂತ್ರವಾದಿಗಳ ಮೇಲೆ ಇಟ್ಟಣ್ಣವರು ಕೆಂಡ ಕಾರುತ್ತಾರೆ.

ನಮ್ಮ ಮಕ್ಕಳ ಮೇಲೆ ಅವರ ನೆರಳು ಬೀಳದಂತೆ ನಾವೇ ನಮ್ಮ ಮಕ್ಕಳನ್ನು ಬೆಳೆಸೋಣವೆಂದು ಕಿವಿಮಾತು ಹೇಳುತ್ತಾರೆ.

ನಮ್ಮ ಮಕ್ಕಳನ್ನು ನಾವೇ ಬೆಳೆಸೋಣ;
ನೋವು ಹೊರುವ ಹೆಗಲ ಮೇಲೆ
ಕತ್ತಿ ಹಿರಿವ ಮುಂಗೈ ಮೇಲೆ
ಇವರ ಹೆಸರು ಕಿವಿಗೆ ಬೀಳದ
ದೂರದ ನಾಡಲ್ಲಿ
ಇಂಥವರ ನೆರಳು ಸೋಂಕದ
ದೂರದ ಊರಲ್ಲಿ. [೧೮]

ಧರ್ಮದ ಮೂಲಭೂತವಾದವನ್ನು ಬೋಧಿಸುತ್ತ ಸಾಮಾಜಿಕ ಶಾಂತಿ ಕದಡುವ ಮೂಲಭೂತವಾದಿಗಳನ್ನು ತರಾಟೆಗೆ ತೆಗೆದುಕೊಳ್ಳುವರು.

ಒಂದ ನೆಲದಾಗ ಹುಟ್ಟಿ ಬೆಳದೀವ ಬಡದಾಡುದು ಯಾಕೊ
ಅಣ್ಣತಮ್ಮಾರಾಗಿ ಜೀವ ಕೂಡ್ಯಾವ ಕಡದಾಡುದ ಸಾಕೊ. [೧೯]

ದೇಶವನ್ನು ಘಾಸಿಗೊಳಿಸಿದ ಮಸೀದೆ–ಮಂದಿರಗಳ ಜಗಳ ಪ್ರಸ್ತಾಪಿಸುತ್ತ ಸೋಲು–ಗೆಲವುಗಳ ಜಿಜ್ಞಾಸೆಯಲ್ಲಿ ತೊಡಗುವರು.

ಮಸೀದಿ ಬಿದ್ದಾವ ಮಂದಿರ ಬಿದ್ದಾವ ಗೆದ್ದವರ್‍ಯಾರಣ್ಣಾ ?
ಜಾತಿ ಧರ್ಮದ ಸೂಜಿಲೆ ಇರದ ಕಳಕೊಂಡಿವೋ ಕಣ್ಣಾ
ಹಾಡ ಹಗಲನ ಕತ್ತಲಾದಾವ ಮರಗತಾವ ಜೀವಾ
ಚಂದ ತ್ವಾಟಕ ಮಂಜ ಮುಸುಕಿತೋ ಕಾಣದ್ಹಾಂಗ ಹೂವಾ. [೨೦]

---

೧೭. ನೋವುಹೊರುವ ಹೆಗಲ ಮೇಲೆ : ಹೊತ್ತು ಮೂಡುವ ಸಮಯ : ಪುಟ–೪೦
೧೮. ಅದೇ.
೧೯. ಹಾರ್‍ಲೂಣು ಬರ್‍ರಿ ಪಾರಿವಾಳಾ : ಹೊತ್ತು ಮೂಡುವ ಸಮಯ : ಪುಟ–೧೬
೨೦. ಅದೇ.

ನಮ್ಮ ದೇಶ ಹಿಂದೂ–ಮುಸ್ಲಿಂ ಸಾಮರಸ್ಯಕ್ಕೆ ಹೆಸರಾಗಿತ್ತು. ಮೊಹರಮ್ ಹಬ್ಬದಲ್ಲಿ ಹಿಂದೂಗಳು ಹಾಡುತ್ತಿದ್ದರು. ಸಂಕ್ರಾಂತಿಯಲ್ಲಿ ಮುಸ್ಲಿಂರು ನಮಗೆ ಎಳ್ಳುಬೆಲ್ಲ ಕೊಡುತ್ತಿದ್ದರು. ಸೌಹಾರ್ದದ ಹಿಂದೂಸ್ತಾನವಿಂದು ಭಯೋತ್ಪಾದಕರ ತಾಣವಾದ ನೋವು ಅವರ ಕವಿತೆಗಳಲ್ಲಿ ಮಿಡಿಯುತ್ತದೆ. ಸೌಹಾರ್ದದ ಸಂಕೇತವಾಗಿ 'ಬಿಳಿ ಪಾರಿವಾಳ' ಹಾರಿಸುತ್ತಾರೆ. ಗಾಂಧೀಜಿಯವರು ಹೇಳಿದ 'ಹಿಂದೂ–ಮುಸ್ಲಿಂ ಭಾಯಿ ಭಾಯಿ' ವಚನ ಮೆಲಕು ಹಾಕುತ್ತಾರೆ.

ಧರ್ಮವು ಗ್ರಂಥಗಳಲ್ಲಿ ಬಂಧಿಯಾಗಿರುವುದೇ ಪ್ರಪಂಚದ ಅಶಾಂತಿಯ ಮೂಲ. ಗ್ರಂಥಗಳಲ್ಲಿಯ ಧರ್ಮ ಆಚರಣೆಗೆ ಬರುವ ಅಗತ್ಯವನ್ನು 'ಗ್ರಂಥ ಭ್ರೂಣ' ಒತ್ತಿ ಹೇಳುತ್ತದೆ.

**ಕುಲದ ಕೆಸರಲ್ಲಿ ಬಿದ್ದು ನೊಂದವರ**
**ಕೈ ಹಿಡಿದು ಎತ್ತಿದರೆ**
**ಬಾಗುವುದು ಭಗವದ್ಗೀತೆ**
**ಬಿಳಿಯ ಕರಿಯನ ಕೈ ಹಿಡಿದು ನಡೆಸಿದರೆ**
**ಸಂಭ್ರಮಿಸುವವು**
**ಬೈಬಲ್ಲಿನ ಪುಟಗಳು.**
**ಗುಡಿಸಲ ಬಡವನ ಅಪ್ಪಿಕೊಳ್ಳುವ**
**ಎದೆಯ ಹರಹನು ಕಂಡು**
**ನಲಿಯುವುದು ಖುರಾಣಿನ ಕರುಣೆ.** [೨೧]

ಧರ್ಮದ ಹಣತೆ ಹೊತ್ತಲು ಎಣ್ಣೆಯ ಒಡಲು ಒಡೆಯಬೇಕು. ಎಣ್ಣೆಯ ಒಡಲು ಬೆಳಕು ಧರ್ಮವಾಗಿ ಬೆಳಗಬೇಕಿದೆ. ಆಗ ಧರ್ಮದ ಸಾರ್ಥಕ್ಯ.

**ಎಣ್ಣೆಯ ಒಡಲೊಡೆದು**
**ಬೆಳಕಾಗುವಂತೆ**
**ಗ್ರಂಥಭ್ರೂಣಗಳೆಲ್ಲ**
**ಮರಿಯಾಗಬೇಕು.**

**ಶಬ್ದಾರ್ಥಗಳೆಲ್ಲ ಹನಿಹನಿಯಾಗಿ**
**ಹದಗೊಂಡು**
**ಬದುಕು ಹಸನಾಗಿಸುವ**
**ಜೀವನದಿಯಾಗಬೇಕು.** [೨೨]

ಶಬ್ದಾರ್ಥಗಳನ್ನು ಜೀವನದಿಯಾಗಿಸುವ ಕವಿತೆ 'ಗುರುದಕ್ಷಿಣೆ', ಪರಿಪೂರ್ಣ ಗುರುವಿನ ಪರಿಪೂರ್ಣ ರೂಪ. ಗುರುಧರ್ಮವನ್ನು ಮೂರ್ತೀಕರಿಸುವಲ್ಲಿ ಯಶಸ್ಸು ಕಂಡಿದೆ. ಗುರುಸ್ಮರಣೆಯೇ

---

೨೧. ಗ್ರಂಥ ಭ್ರೂಣ : ಹೊತ್ತು ಮೂಡುವ ಸಮಯ : ಪುಟ–೨೧
೨೨. ಅದೇ.

ನಿಜವಾದ ಗುರುದಕ್ಷಿಣೆ.

**'.............. ಊಟಕ್ಕೆ ಕುಳಿತಾಗಲೆಲ್ಲ**
**ಮೊದಲ ತುತ್ತ ಎತ್ತುವ ಮೊದಲು,**
**...... ಗುರುಗಳು ನೆನಪಾಗಬೇಕು'** ೨೩

ಡಾ. ಶ್ರೀರಾಮ ಇಟ್ಟಣ್ಣವರ, ವೈಚಾರಿಕ ಅಗ್ಗಷ್ಟಿಕೆಯಲ್ಲಿ ಧರ್ಮವನ್ನು ಪರೀಕ್ಷಿಸುತ್ತಾರೆ. ಜರಗು ಚೆಲ್ಲುತ್ತಾರೆ, ಅಪರಂಜಿ ಹುಡುಕುತ್ತಾರೆ. ಅವರ ಧರ್ಮ ಜಿಜ್ಞಾಸೆ ಕುವೆಂಪು ಸಂದೇಶವನ್ನು ಪ್ರತಿಬಿಂಬಿಸುತ್ತದೆ.

ಇವರಿಗೆ ಬಸವಣ್ಣ ಧರ್ಮದ ಆದರ್ಶ. 'ಅಂತರಂಗದ ಕವನ ತೆರೆದು ದೇಹ ದೇಗುಲ ಮಾಡಿದ ಚೈತನ್ಯದ ಶಿಖರ. ದಯದ ಧರ್ಮ ಬೋಧಿಸಿ, ಜಗದಗಲ ಮುಗಿಲಗಲವಾಗಿನಿಂದ ಮಹಾಬೆಳಗು.' ಕಾಯಕ–ಸಮಾನತೆ–ಸಿದ್ಧಾಂತಕ್ಕೆ ಶರಣು ಹೋದ ಇಟ್ಟಣ್ಣವರಿಗೆ ಬಸವಣ್ಣ ಅಂತಃಕರಣದಲ್ಲಿ ವೇದಿಕೆ ಕಟ್ಟುತ್ತಾನೆ. 'ಬಾಲ್ಯದ ಹೂದೋಟದಲ್ಲಿ ಹೂ ಅರಳಿಸಿದ ಬಸವ, ಹರೆಯದಲ್ಲಿ ಕೋಟಿ ನಕ್ಷತ್ರಗಳ ನಗಿಸುತ್ತಾನೆ.' ವೈರುಧ್ಯವೆಂದರೆ ಬಸವಣ್ಣನ ಅನುಯಾಯಿಗಳು ಬಸವನಿಗೆ ಅರ್ಪಿಸಿಕೊಂಡ ಕವಿಯನ್ನೇ ಹೊರಗಿಡುತ್ತಾರೆ. ಇದುವೇ ಸಾಂಸ್ಕೃತಿಕ ವೈರುಧ್ಯ.

**ಕುಲದ ಕಾಲ್ತೊಡಕಿನಲಿ ಹಿಂದುಳಿದು**
**ಕಳೆದುಕೊಂಡವ ನಾನು**
**ನೂರು ಕನಸಿನ ಬಣ್ಣ**
**ನಾನು ಹೊರಗುಳಿದೆ ಬಸವಣ್ಣ.** ೨೪

ಇಲ್ಲಿಯ ವಿಷಾದ ಸಾಂಸ್ಕೃತಿಕ ಲೋಕದ ಮೌಲ್ಯಗಳ ಅಧಃಪತನದ ಚರಿತ್ರೆಗೆ ಶ್ರುತಿ ಹಿಡಿಯುತ್ತದೆ. ಬಸವಣ್ಣ ಯಾರನ್ನು ಹೊರಗಿಡಲಿಲ್ಲ. ಹೊರಗಿದ್ದವರನ್ನು ಒಳಗೆ ಕರೆಯುವುದೇ ಬಸವಧರ್ಮ. ಬಸವಣ್ಣನ ಜಂಗಮಧರ್ಮ ಮತ್ತೆ ಸ್ಥಾವರಗೊಂಡ ವಿಷಾದ ಧ್ವನಿಪೂರ್ಣವಾಗಿದೆ. ಇದು ಇಷ್ಟಕ್ಕೆ ನಿಲ್ಲದೆ ಇಂದಿನ ಬಸವಧರ್ಮದ ಸ್ಥಿತಿಯನ್ನು ವಿಡಂಬನೆಗೆ ವಸ್ತುವಾಗಿಸುತ್ತದೆ. ಹೀಗೆ ಡಾ. ಇಟ್ಟಣ್ಣವರ ಧರ್ಮಜಿಜ್ಞಾಸೆ ಧರ್ಮದ ಅಂತಃಶೋಧಕ್ಕೆ ಪ್ರೇರೇಪಿಸುತ್ತದೆ.

### ೫.೩. ಸಾಂಸ್ಕೃತಿಕ ಹಣತೆಗಳು :

ಕವಿ ಇಟ್ಟಣ್ಣವರು ರೇಖಿಸಿದ ಬೇಂದ್ರೆ, ಕಲಬುರ್ಗಿ ಹಾಗೂ ಕಣವಿಯವರ ವ್ಯಕ್ತಿಚಿತ್ರಗಳು ಕನ್ನಡ ಸಾಂಸ್ಕೃತಿಕ ಲೋಕದ ಮೂರು ಹಣತೆಗಳು. ಬೇಂದ್ರೆ ಹಾಗೂ ಕಣವಿ ಕವಿಗಳು, ಕಲಬುರ್ಗಿ ಸಂಶೋಧಕರು. ಮೂವರಿಗೂ ಧಾರವಾಡವೇ ಸ್ತಂಭ. ಮೂವರನ್ನು ಇಟ್ಟಣ್ಣವರ ತೀರ ಹತ್ತಿರದಿಂದ ಕಂಡವರು, ಅನುಭವ ಉಂಡವರು. ಇವರ ಬದುಕಿನಲ್ಲಿ ಮೂವರು ಸೆಲೆಗಳಾಗಿ ಮೂಡಿದವರು.

ದ.ರಾ.ಬೇಂದ್ರೆ ಶತಮಾನದ ಜೋಗಿಯನ್ನು ಕನ್ನಡಕ್ಕೆ ಕೊಟ್ಟ ಕವಿಯೋಗಿ. ಸಾಧನಕೇರಿಯೇರಿ

---
೨೩. ಗುರುದಕ್ಷಿಣೆ : ಹೊತ್ತು ಮೂಡುವ ಸಮಯ : ಪುಟ-೩೬

೨೪. ನಾನು ಹೊರಗಳಿದೆ ಬಸವಣ್ಣ : ಹೊತ್ತು ಮೂಡುವ ಸಮಯ : ಪುಟ-೫೮

ಗಾಳಿಗೆ ಪಕ್ಕ ಮಸೆದ ಭಾವಬ್ರಹ್ಮನ ಶಿಲ್ಪವನ್ನು ಇಟ್ಟಣ್ಣವರ ಸುನೀತಧ ಹಾಲುಗಲ್ಲಿನಲ್ಲಿ ಕಂಡರಿಸಿದ್ದಾರೆ. 'ಬೇಂದ್ರೆ ಬೆಂದು ಬೂದಿಯಲಿ ಅಂಬಿಕಾತನಯದತ್ತ ಸೃಷ್ಟಿ' ಎಂಬ ಒಂದೇ ಸಾಲು ಸಾಕು, ಈ ವ್ಯಕ್ತಿ ಚಿತ್ರದ ಯಶಸ್ಸಿಗೆ. ಸುನೀತದ ಒಂದು ಸಾಲು ಒಂದು ಕಾವ್ಯ ಸಿದ್ಧಾಂತವನ್ನೇ ಕಣ್ಣು ಮುಂದೆ ತೆರೆದಿಡುತ್ತದೆ. ಬೇಂದ್ರೆ ಕಾವ್ಯಗಂಗೆಯ ನಾದ, ಲಯ, ಗತ್ತು, ಜನಪದ ಭಾಷೆ, ಅಧ್ಯಾತ್ಮದ ಅಂಟು, ಸಂಬಂಧದ ನಂಟು ಎಲ್ಲವನ್ನು ಭಟ್ಟಿ ಇಳಿಸಿ, 'ಹೊತ್ತು ಮೂಡುವ ಸಮಯ'ಕ್ಕೆ ಸುಂದರ ಕವಿತೆ ಕೊಟ್ಟಿದ್ದಾರೆ.

**ಕನಸಿನೊಳಗೊಂದ ಕನಸ ಕಂಡಿರಿ ನಿಮ್ಮದೆಂಥ ಕಣ್ಣಾ**
**ನಾದಲೀಲೆ ಗರಿಯಾಗಿ ತೇಲುವದು ಬಳಿದು ನೂರು ಬಣ್ಣಾ**
**ಜೀವಲಹರಿ ಉಯ್ಯಾಲೆ ಏರಿ ನೀವಾಗಿ ಕಾವ್ಯ ಶೃಂಗಾ**
**ನಿಮ್ಮ ನೆನಪು ಕುಣಿಕುಣಿವ ಒನಪು ಜುಂಯ್ ಎನ್ನುವ ಭಾವಭೃಂಗಾ.** ೨೫

ಬೇಂದ್ರೆ ಭಾಷೆ-ಭಾವದಲ್ಲಿಯೇ ಬೇಂದ್ರೆ ಶಿಲ್ಪ ನಿರ್ಮಾಣಗೊಳ್ಳುತ್ತದೆ. ಅರವತ್ತರ ಘಟ್ಟದಲ್ಲಿ ಬೇಂದ್ರೆ ಸಂಖ್ಯಾಶಾಸ್ತ್ರಕ್ಕೆ ತೀರ ಹತ್ತಿರಾದರು. 'ಅಂಕ ಗಲಗಿಸಿ ಕಂಕಿ ತೆಗೆದು ಕವಿತೆಗಳನ್ನು ರಾಶಿ ಮಾಡಿದರು.' ಜೋಗಿ ಕವಿತೆಯ ಮಾಮರ, ಕೋಗಿಲೆ, ಹುತ್ತ, ಮೂರು ದಾರಿ ಎಲ್ಲವೂ ಇಲ್ಲಿ ಅವತರಣಗೊಳ್ಳುತ್ತವೆ.

**ಎತ್ತ ಮಾಮರಾ ಎತ್ತ ಕೋಗಿಲಾ ಎಲ್ಲಿಗೆಲ್ಲಿ ಪಯಣಾ**
**ಅಂಕ ಗಲಗಿಸಿ ಕಂಕಿ ತೆಗೆದಿರಿ ರಾಶಿ ಮಾಡಿ ಹವಣಾ**
**ಮೀರಿ ಕಾವಳಾ ಬೆಳಕವೇರಿ ನೀ ನಿಂತೆಯಲ್ಲೋ ಹೋಗಿ**
**ಗೂಢಮೂಢ ಮರೆಯಾಗಿ ನಮಗ ನೀ ನಿಲುಕಲಿಲ್ಲೋ ಜೋಗಿ.** ೨೬

ಕವಿ ಈ ಪದ್ಯದಲ್ಲಿ ನಮ್ಮ ಕಲ್ಪನೆಗೆ ನಿಲುಕದ ಜೋಗಿಯನ್ನು ಕಂಡರಿಸಿದ ನಾದದ ಕವಿಯೋಗಿಯ ಭಾವ ಮೀಟಿದ್ದಾರೆ. ಬೇಂದ್ರೆ ನೆನಪೇ ಕನ್ನಡ ಕಾವ್ಯ ಪರಂಪರೆಯನ್ನು ಕಣ್ಣುಮುಂದೆ ದರ್ಶಿಸುತ್ತದೆ.

ಚೆನ್ನವೀರ ಕಣವಿ ಇಟ್ಟಣ್ಣವರ ಕಾವ್ಯದ ಮತ್ತೊಂದು ಹಣತೆ, ಕಣವಿ ಅಜಾತಶತ್ರು, ಕಣವಿ ಹಾಗೂ ಜಿ.ಎಸ್. ಶಿವರುದ್ರಪ್ಪ ಈ ಶತಮಾನದ ಬೇಂದ್ರೆ-ಕುವೆಂಪು ಇದ್ದಂತೆ. ಇಬ್ಬರದು ಸಮನ್ವಯ ಮಾರ್ಗ. ಕಣವಿ ಕಾವ್ಯ ಶಾಂತ ತೊರೆ. ಕಣವಿ ಒಂದು ದೃಷ್ಟಿಯಿಂದ ಬೇಂದ್ರೆ ವಾರಸುದಾರ. ಅವರ ಕಾವ್ಯದ ಮುಖ್ಯ ಪ್ರೇರಣೆಗಳು ಎರಡು-ಒಂದು ಮಧುರಚೆನ್ನರ ಅನುಭಾವ, ಮತ್ತೊಂದು ಬೇಂದ್ರೆಯವರ ಜೀವಭಾವ.

ಕಣವಿಯವರು ಕಾವ್ಯದಂತೆಯೇ ಮೃದು ಮತ್ತು ಮಧುರ. ಮೃದು ಮಧುರ ಭಾವ ಸಂಚಯಗೊಂಡು ನಿಂತಂತೆ । ಅಂಚೆದುಪ್ಪಳ ಮನದ ಭಾವಜೀವಿ ಕಸ್ತೂರಿ ಕನ್ನಡಕ್ಕೆ ಚೆಂಬೆಳಕ ಮೂಡಿಸಿದ ಭಾವಬೆಳಕಿನ ಛವಿ.

ಕಣವಿಯವರು ಸ್ವಭಾವದಲ್ಲಿ ತುಂಬ ಸೌಮ್ಯ. ಬೆಳದಿಂಗಳು ತುಳುಕಿದಂತೆ ಮಾತು. ಮಾತುಗಳಲ್ಲಿ ಬದುಕು ತುಂಬುವಂತೆ ಕವಿತೆ. ಕಾವ್ಯ ಬೇಟಕೆ ಗಂಧಗಾಳಿ ಹೊಂದಿಸುವ ಬಂಧ. ಅವರ ದೃಷ್ಟಿಯಲ್ಲಿಯೇ ಶಬ್ದಗಳು ಸೃಷ್ಟಿಗೊಳ್ಳುತ್ತವೆ. ಏಕೆಂದರೆ ವಸ್ತುಗ್ರಹಿಕೆಯ ರೀತಿ ಅನೂಹ್ಯವಾದುದು.

---

**೨೫. ಬೇಂದ್ರೆ : ಹೊತ್ತು ಮೂಡುವ ಸಮಯ : ಪುಟ-೧೧**
**೨೬. ಅದೇ.**

ಕಣ್ಣು ಹರಿಯುವ ತನಕ ಬರಿದಾದ ಬೋಳುಮರ
ನಗರದಲಿ ನೆರಳನ್ನು ಕಾಣದವರು
ಅಂದಿನಿಂದಿಂದಿಗೂ ನಮ್ಮ ಹಳ್ಳಿಯ ಚೆಂದ
ಎನುತ ನೆನಪಿನ ತೇರವೆಳೆಯುವರು. ೨೭

ಇಟ್ಟಣ್ಣವರ ಬಳಸಿದ 'ತೇರು' ಕಣವಿ ಕಾವ್ಯದ ಉಜ್ವಲ ರೂಪಕ. ಜಿ.ಎಸ್.ಎಸ್. ಅವರಿಗೆ ಹಣತೆ ಹೇಗೋ ಹಾಗೆ ಕಣವಿಯವರಿಗೆ ತೇರು. ಕಣವಿ ಕಾವ್ಯದಲ್ಲಿ ಮತ್ತೆ ಮತ್ತೆ ತೇರು ವಿಜೃಂಬಿಸುವುದು. ಅದು ಸಿರಿಗನ್ನಡದ ನುಡಿಸಿರಿ. ಅವರ 'ಕಾವ್ಯಾಕ್ಷಿ, ಎರಡುದಡ, ನೆಲಮುಗಿಲು, ಮಧುಚಂದ್ರ ಒಂದೊಂದು ಕಾವ್ಯ ಕನ್ನಡದ ಅಮೃತ ಕುಂಭ.'

ಕಣವಿ ಕಾವ್ಯ ಕಣಿವೆ. ಅವರು ತೇಲಿ ಬಿಟ್ಟ ಆಕಾಶ ಬುಟ್ಟಿಯಲ್ಲಿಟ್ಟ ಹಣತೆಗಳು ಕಾಣುತ್ತವೇ ಆದರೆ ಕಣಿವೆಯ ಒಡಲದ ಒಗಟು ಬಿಡಿಸಲು ಆಗದು. ಇನ್ನೆಷ್ಟು ಸೆಲೆಗಳು ಮೂಡವವ್ರೋ ತಿಳಿಯದು. 'ಕಣವೆಯೊಳಗೇನುಂಟು ಯಾವ ಬಲ್ಲ' ಎಂಬ ಪ್ರಶ್ನೆಗೆ ಭವಿಷ್ಯವೇ ಉತ್ತರಿಸಬೇಕು. ಕಣವಿಯವರಿಗೆ ಈಗ ಎಂಬತ್ತು. ಈಗಲೂ ಕಣವಿಯವರ ಉತ್ಸಾಹ ಬತ್ತಿಲ್ಲ. ಮಂಗಳದ ಜಯಭೇರಿ ಬಾನತುಂಬಿ ನಿನದಿಸುತ್ತಿದೆ.

ಕಣವಿ ಕಾವ್ಯದಲ್ಲಿಯ ಜೀವಸಂವೇದನೆಗಳನ್ನು ಬಳಸಿಕೊಂಡೆ ಈ ಕವಿತೆ ವ್ಯಕ್ತಿಚಿತ್ರ ಬಿಡಿಸಿದ್ದು ವಿಶೇಷ. ಬೇಂದ್ರೆ ಚಿತ್ರಕ್ಕೆ ಅವರ ಭಾವ-ಭಾಷೆ ಏಣಿ. ಕಣವಿ ಕವಿತೆಗೆ ಕಣವಿಯವರ ರೂಪಕಗಳೇ ಭಾವಶ್ರೇಣಿ.

'ಬೇಂದ್ರೆ' ಕವಿತೆ ಶಬ್ದಶಿಲ್ಪ ; 'ಕಣವಿ' ಕವನ ಭಾವಬಿಂಬ. ಕಲಬುರ್ಗಿ ಗುರುಗಳು ವರ್ಣಚಿತ್ರ. ಬೇಂದ್ರೆ ಕಣವಿಯವರಿಗಿಂತಲೂ 'ಕಲಬುರ್ಗಿ' ಕವಿತೆ ಆಕರ್ಷಕ. ಕವಿ ಇಟ್ಟಣ್ಣವರ ಕಲಬುರ್ಗಿಯವರನ್ನು ಒಳಹೊಕ್ಕು ಅರಿತವರು, ಅಳೆದವರು. ಎ.ಕೆ.ರಾಮಾನುಜನ್ ಕವಿತೆಯ 'ಅಂಗುಲ ಹುಳುವಿನ ಪರಕಾಯ ಪ್ರವೇಶವದು.'

ಇಟ್ಟಣ್ಣವರ ಕಾವ್ಯಕ್ಕೆ ಕಲಬುರ್ಗಿ ಗುರುಗಳು ಸಂಪೂರ್ಣ ಕೈವಶವಾಗಿದ್ದಾರೆ. ಡಾ. ಕಲಬುರ್ಗಿ ಎಂದರೆ ಪ್ರಶ್ನೆಗಳ ಜಡಿಮಳೆ. ಪ್ರಾಯಶ; ಆ ಕಾರಣದಿಂದಲೇ ಪ್ರಶ್ನೆಯ ಮೂಲಕವೇ ಕವಿ ಅವರನ್ನು ಪ್ರವೇಶಿಸುವರು –

ಗದ್ಯವೇ ಆಗಿರುವ
ಗುರುಗಳ ಮೇಲೆ ಪದ್ಯ
ಬರೆಯುವುದು ಹೇಗೆ ? ೨೮

ಕವಿತೆಗೆ ಭಾವ ಆಕರ. ಕಲಬುರ್ಗಿಯವರಲ್ಲಿ ಈ ಭಾವನೆಗಳಿಗೆ ಬಿಡುವೇ ಇಲ್ಲ. ಸದಾ ಸಂಶೋಧನೆಗೆ ಸುತ್ತುವ ಗಡಿಬಿಡಿ. ಯಾರು ಹಿಡಿಯದ ಓಟ. ಯಾವಾಗಲೂ ದುಡಿತ, ತುಡಿತ.

ಪ್ರಶ್ನೆಗಳಲ್ಲಿಯೇ ಕವಿತೆ ಮೂಡುತ್ತದೆ. ಬೇಂದ್ರೆ ಮಗ್ಗುಲದಲ್ಲಿದ್ದರೂ ಭಾವಭೃಂಗ ಕಲಬುರ್ಗಿಯವರಲ್ಲಿ ನಾದ ತುಂಬಲಿಲ್ಲ. ಕಣವಿ ಗಾಳಿಗೆ ಬಾಗಿಲು ತೆರೆದಿಟ್ಟರೂ ಕವಿತೆ ಕೂಗಲಿಲ್ಲ.

೨೭. ಕಣವಿ : ಹೊತ್ತು ಮೂಡುವ ಸಮಯ : ಪುಟ-೩೮
೨೮. ಕಲಬುರ್ಗಿ ಗುರುಗಳು : ಹೊತ್ತು ಮೂಡುವ ಸಮಯ : ಪುಟ-೧೮

**ಗ್ರಂಥ ಗಹ್ವರ ಹೊಕ್ಕು ಬಿಟ್ಟರೆ**
**ಕವಿತೆಗೆ ಕದ ತಟ್ಟುವ ಧೈರ್ಯವಿಲ್ಲ.** ೨೯

ಬಿಡುವಿಲ್ಲದ ದುಡಿಮೆ ಕಲಬುರ್ಗಿಯವರ ಜೀವನ ವಿಧಾನ. ಬೆಟ್ಟ ಸೀಳುವ ಸಾಹಸ ಇವರ ಹವ್ಯಾಸ. ಮನೆಯವರಿಗೂ ಅಪವೇಳೆಯ ಅತಿಥಿ. ಹೊತ್ತು ಗೊತ್ತು ಯಾವುದೂ ಇಲ್ಲದ 'ಶಾಸನ'. ಮುಳ್ಳು ಆವಿಗೆಯ ದಿವ್ಯ ಗೆದ್ದ ಸಾಧನ. ಬದುಕಿನೊಂದಿಗೆ ಜಿದ್ದು ಕಟ್ಟಿದವರೊಂದಿಗೆ ಕವಿತೆಯೂ ಹೆದರುತ್ತದೆ.

**ಮುಳ್ಳು ಆವಿಗೆ ಮೇಲೆ ನಿಂತು**
**ಅಗ್ನಿದಿವ್ಯಗಳನ್ನು ಎದುರಿಸುತ್ತಲೇ**
**ಬಂದವರಿಗೆ**
**ಎಲ್ಲಿಯ ಕವಿತೆ ಕೂಡಲಸಂಗಮದೇವಾ!** ೩೦

ಚರಣಾಂತ್ಯದ ಉದ್ಗಾರದಲ್ಲಿ ನೂರು ಶಬ್ದಗಳಿಗೂ ತುಂಬಲಾಗದ ಧ್ವನಿಯಿದೆ. ಸತ್ಯ ಒಂದು ದಿವ್ಯ. ಸಂಶೋಧನ ಸತ್ಯವನ್ನು ಸಮಾಜ ಅರಗಿಸಿಕೊಳ್ಳುವುದು ಕಠಿಣ. ಹಲವು ಸಂದರ್ಭಗಳಲ್ಲಿ ಕಲಬುರ್ಗಿ ಮುಳ್ಳು ಆವಿಗೆ ಮೇಲೆ ನಿಲ್ಲಬೇಕಾಯಿತು. ನೋವು ಮೆಲ್ಲಬೇಕಾಯಿತು, ದಿವ್ಯ ಗೆಲ್ಲಬೇಕಾಯಿತು. ಅವರ ಬದುಕಿನ ದಿವ್ಯಗಳನ್ನು ಉಲ್ಲೇಖಿಸುತ್ತಲೇ ಕವಿತೆ ಒಮ್ಮೆಲೆ ಅಂತರ್ಮುಖಿಯಾಗುತ್ತದೆ. ಸಂಶೋಧಕನ ಪೂರ್ಣ ಶೋಧನೆಗೆ ತೆರೆದುಕೊಳ್ಳುತ್ತದೆ.

**ಇವರು ಕವಿತೆಯಾಗುವುದಿಲ್ಲ**
**ಕತೆಯಾಗುತ್ತಾರೆ**
**ಕಾದಂಬರಿಯಾಗುತ್ತಾರೆ**
**ಮಹಾಪ್ರಬಂಧವಾಗುತ್ತಾರೆ.** ೩೧

ಕಲಬುರ್ಗಿಯವರಿಗೆ ಕವಿಯಾಗಬೇಕೆಂದು ಕೆಲವೊಮ್ಮೆ ಅನಿಸಿದ್ದುಂಟು. ಆದರೆ ಅವರ ವ್ಯಕ್ತಿತ್ವ ಪದ್ಯದ್ದಲ್ಲ; ಗದ್ಯದ್ದು. ಅವರು ಕತೆ-ಕಾದಂಬರಿ, ಮಹಾಪ್ರಬಂಧವಾಗಬಹುದು, ಆದರೆ ಕವಿತೆಯಾಗುವುದಿಲ್ಲವೆಂದು ಕವಿ ಹೇಳುವ ರೀತಿಯೇ ಚೇತೋಹಾರಿಯಾಗಿದ್ದು, ಗಬಕ್ಕನೇ ನಮ್ಮ ಮನಸ್ಸನ್ನು ಕವಿತೆ ತನ್ನ ಮುಷ್ಟಿಯಲ್ಲಿ ಹಿಡಿದು ಬಿಡುತ್ತದೆ.

ಕಾವ್ಯದ ವಿಶ್ಲೇಷಣೆ ಮನೋವಿಶ್ಲೇಷಣೆಯಂತೆ ಜಟಿಲ, ಎಷ್ಟು ನಿಟ್ಟುಗಳಿಂದ ನೋಡಿದರೂ ಒಂದು ನಿಟ್ಟು ಉಳಿದೇ ಉಳಿಯುತ್ತದೆ. ಇಟ್ಟಣ್ಣವರ ಕಾವ್ಯವನ್ನು ಮೂರು ಮುಖ್ಯ ನೆಲೆಗಳಲ್ಲಿ ವಿಶ್ಲೇಷಿಸಿದರೂ ಪರಿಪೂರ್ಣತೆಯ ಸಮಾದಾನ ಸಿಗುವುದಿಲ್ಲ. ಅವರ ಸಾಂಸ್ಕೃತಿಕ ತುಡಿತಗಳೆಲ್ಲ ಅಳತೆಗೆ ಒಗ್ಗುವುದಿಲ್ಲ. ಆದರೆ ಅಲ್ಲಿಯ ತಲ್ಲಣಗಳು ಸ್ಪಷ್ಟವಾಗಿ ಮನಮೀಟುತ್ತವೆ. ಆಧುನಿಕ ಹಾಗೂ ಸಾಂಪ್ರದಾಯಿಕ ಸಂಘರ್ಷವನ್ನು ದಾಖಲಿಸುತ್ತವೆ.

---

೨೯. ಅದೇ.
೩೦. ಅದೇ ಪುಟ-೧೯
೩೧. ಅದೇ.

## ಅಧ್ಯಾಯ – ೬

# ಕವಿ ಇಟ್ಟಣ್ಣವರ ಮತ್ತು ಕಾವ್ಯ ಪರಂಪರೆ

ಒಬ್ಬ ಕವಿಯ ಕಾವ್ಯವನ್ನು ತಲಸ್ಪರ್ಶಿಯಾಗಿ ಅಧ್ಯಯನಿಸುವಾಗ ಅದನ್ನು ಕಾವ್ಯ ಪರಂಪರೆಯೊಂದಿಗೆ ತೂಗುವದು ಅನಿವಾರ್ಯ. "ಕಾವ್ಯ ನಿರ್ಮಿತಿ ಒಂದು ಸಾಹಿತ್ಯ ಪರಂಪರೆಯ ಹಿನ್ನೆಲೆಯಲ್ಲಿ ನಡೆಯುವ ಕ್ರಿಯೆಯಾದ್ದರಿಂದ, ಈ ಪರಂಪರೆಯ ವಿವಿಧ ಕಾಲಮಾನಗಳಲ್ಲಿ ತಮ್ಮ ಅಭಿವ್ಯಕ್ತಿಯನ್ನು ಕಂಡುಕೊಳ್ಳುವ ಕವಿಗಳು ತಾವು ನಿಂತ ಪರಂಪರೆಗೆ ಯಾವ ರೀತಿಯ ಪ್ರತಿಕ್ರಿಯೆಗಳನ್ನು ತೋರುತ್ತಾರೆ ಎನ್ನುವುದು ಅವರ ಕಾವ್ಯಕಲ್ಪನೆಗೆ ಬಹುಮುಖ್ಯವಾದ ಸಂಗತಿಯಾಗಿದೆ."[೧] ಹತ್ತೊಂಬತ್ತನೆಯ ಶತಮಾನದ ಕೊನೆಯ ಘಟ್ಟದಲ್ಲಿ ಕನ್ನಡ ಕಾವ್ಯ ವಿಶಿಷ್ಟ ತಿರುವು ಪಡೆಯಿತು. 'ಕಥನ ಪರಂಪರೆಯಿಂದ ಹರತ್ತಾನೆ ವ್ಯಕ್ತಿನಿಷ್ಠ ಕಾವ್ಯಾಭಿವ್ಯಕ್ತಿಯ ಕಡೆಗೆ ಹೊರಳಿತು', "ಇದರಿಂದ ಸೂಚಿತವಾಗುವುದೇನೆಂದರೆ ಕಾವ್ಯದಲ್ಲಿ ವಸ್ತು ಮುಖ್ಯವಲ್ಲ; ಆ ವಸ್ತುವಿನ ಮೂಲಕವಾಗಿ ಕವಿ ಏನನ್ನೋ ಹೇಳುತ್ತಾನೋ ಅದು ಮುಖ್ಯ. ಆ ವಸ್ತುವಿನ ನಿಮಿತ್ತವಾಗಿ ಅಭಿವ್ಯಕ್ತವಾಗುವ ಭಾವ, ಭಾವನೆಗಳೇ ಇಲ್ಲಿ ಪ್ರಧಾನ"[೨] ಅಭಿವ್ಯಕ್ತಿ ಕ್ರಮದಲ್ಲಾದ ಈ ಬದಲಾವಣೆಗೆ ಮುಖ್ಯ ಕಾರಣ ಪಶ್ಚಿಮ ಸಾಹಿತ್ಯದ ಪ್ರೇರಣೆ ಹಾಗೂ ಪ್ರಭಾವ. ನಮ್ಮ ಕವಿಗಳ ಪ್ರಜ್ಞೆ, ಗ್ರಹಿಕೆಯ ಸ್ವರೂಪ ಬದಲಾದವು. "ಆದರೆ ಕನ್ನಡ ಪ್ರತಿಭೆ, ಪಶ್ಚಿಮದ ಕಾವ್ಯದ ಅನುಕರಣೆಯ ಚಾಪಲ್ಯಕ್ಕೆ ಬಲಿಯಾಗಲಿಲ್ಲ; ಅದರ ಬದಲು, ತನ್ನ ಹೊಸ ಪ್ರಜ್ಞೆಯಲ್ಲಿ, ಅದು ಒಂದೆಡೆ ಪಶ್ಚಿಮದ ಸಾಹಿತ್ಯ ಪರಂಪರೆಗೂ, ಮತ್ತೊಂದೆಡೆ ತನ್ನ ಪ್ರಾದೇಶಿಕ ಹಾಗೂ ಭಾರತೀಯ ಸಾಹಿತ್ಯ ಪರಂಪರೆಗೂ ಏಕಕಾಲದಲ್ಲಿ ತೋರಿದ ಸೃಜನಾತ್ಮಕ ಪ್ರತಿಕ್ರಿಯೆಯ ಕಾರಣದಿಂದ, ತನ್ನ ಸ್ವಂತದ್ದನ್ನು ಬೆಳೆದುಕೊಂಡಿತು."[೩] ನವೋದಯ ಪ್ರಗತಿಶೀಲ–ನವ್ಯ–ದಲಿತ ಬಂಡಾಯ–ಬಂಡಾಯೋತ್ತರ ಚಳುವಳಿಗಳನ್ನು ಕಂಡಿತು. "ಜೀವನವು ಸಜೀವವಾಗಿರಬೇಕಾದರೆ ಅದು ಕ್ಷಣಕ್ಷಣಕ್ಕೂ ಪುರಾತನದ ಸತ್ವಸಾರವನ್ನು ಸಂಗ್ರಹಿಸುತ್ತಾ ನೂತನಕ್ಕೆ ಹರಿಯಬೇಕು. ತನ್ನನ್ನೂ ತಾನೇ ಮೀರುತ್ತಿರಬೇಕು. ತಮ್ಮ ಅಂತರಾತ್ಮದಲ್ಲಿ ನಿರಂತರವೂ ಯೋಗಸಾಧನ ಮಾಡುತ್ತಿರುವ ನವೀನ ಮಾನವರೆಲ್ಲರೂ ಕವಿಗಳಾಗಿದ್ದಾರೆ. ಸಾಹಿತಿಯಾದ ಕವಿಯಂತೂ ನವೀನ ಮಾನವನಾಗಿರಲೇಬೇಕು. ಹಾಗಿಲ್ಲದಿದ್ದರೆ ಮುಖಸ್ತುತಿಯನ್ನು ಛಂದಸ್ಸಿಗೆ ತಿರುಗಿಸುವ ಪದ್ಯರಚಕನಾಗುತ್ತಾನೆ."[೪] ಪರಂಪರೆಯ ಪ್ರಜ್ಞೆ, ಕವಿಯ ನಾವೀಣ್ಯತೆ, ಸಮಕಾಲೀನ ಸ್ಥಿತಿಗೆ ಸ್ಪಂದನೆಗಳನ್ನು ಪ್ರಧಾನವಾಗಿಟ್ಟುಕೊಂಡು ಇಟ್ಟಣ್ಣವರ ಕಾವ್ಯದ ಬೆಲೆಗಟ್ಟುವ ಪ್ರಯತ್ನವಿದು.

---

೧. ಡಾ. ಜಿ.ಎಸ್. ಶಿವರುದ್ರಪ್ಪ : ಕನ್ನಡ ಕಾವ್ಯತತ್ವ ಚಿಂತನೆ : ಪುಟ–೧೩೪

೨. ಅದೇ. ಪುಟ–೧೩೫

೩. ಅದೇ. ಪುಟ–೧೩೭

೪. ಕುವೆಂಪು : ಹೊಸ ಸಾಹಿತ್ಯ ದೃಷ್ಟಿ (ಲೇ) : ಕನ್ನಡ ಸಾಹಿತ್ಯ ಮೀಮಾಂಸೆ : ಪುಟ–೮೦

ಇಟ್ಟಣ್ಣವರ 'ಹೊಳಿಸಾಲ ಬಳ್ಳಿ' ಅಂಕುರಿಸಿದ ಸಂದರ್ಭದಲ್ಲಿ ನವ್ಯೋದಯ ತಣ್ಣಗಾಗಿತ್ತು. ಪ್ರಗತಿಶೀಲ ಚಳವಳಿ ನೆಲಕಚ್ಚಿತ್ತು. ನವ್ಯ ತತ್ತರಿಸಿತ್ತು. ಎಪ್ಪತ್ತರ ದಶಕ ಬಂಡಾಯ ಚಳುವಳಿಗೆ ಕಾವ್ಯ ಕೊಡುತ್ತಿತ್ತು.

"೧೯೭೯ ಮಾರ್ಚ ೧೦ ಹಾಗೂ ೧೧ ರಂದು ಬೆಂಗಳೂರಿನಲ್ಲಿ ನಡೆದ, ರಾಜ್ಯಮಟ್ಟದ ಪ್ರಥಮ ಬಂಡಾಯ ಸಾಹಿತ್ಯ ಸಮ್ಮೇಳನದ ಮೂಲಕ, ಕರ್ನಾಟಕದಲ್ಲಿ ಪ್ರಾರಂಭವಾದ ಬಂಡಾಯ ಸಾಹಿತ್ಯ ಚಳವಳಿ ದಿಢೀರನೆ ಹುಟ್ಟಿಕೊಂಡಿದ್ದಲ್ಲ"[೫] ಎಪ್ಪತ್ತರ ದಶಕದ ಉತ್ತರಾರ್ಧದಲ್ಲಿ ಬಂಡಾಯದ ಬೀಜಗಳು ಅಂಕುರಿಸುತ್ತಿದ್ದವು. 'ಹೊಳಿಸಾಲ ಬಳ್ಳಿ' ಮೂಡಿದ ೧೯೭೩ನೇ ವರ್ಷ ಕನ್ನಡದ ಸಾಂಸ್ಕೃತಿಕ ಚರಿತ್ರೆಯಲ್ಲಿ ಗಮನಾರ್ಹವಾದುದು. ಆ ವರ್ಷದಲ್ಲಿ ನಡೆದ ಬಸವಲಿಂಗಪ್ಪನವರ ಬೂಸಾ ಪ್ರಕರಣ ಬಂಡಾಯದ ಬೀಜಗಳಿಗೆ ನೀರು-ಗೊಬ್ಬರ ನೀಡಿದ್ದು ತಿಳಿದ ಸಂಗತಿ-ಹಿಂಗಾರು ಮಳೆ ಹನಿಯುವ ಮೊದಲು ಬಿಸಿಲು ಕಾಯುವಂತೆ ಕನ್ನಡದಲ್ಲಿ ಕಾವು ನಿರ್ಮಾಣವಾಗಿತ್ತು. ಆ ಸಂದರ್ಭದಲ್ಲಿ ಶ್ರೀರಾಮ ಇಟ್ಟಣ್ಣವರ 'ಹೊಳಿಸಾಲ ಬಳ್ಳಿ' ಹರಡಿದರು. ಹಳ್ಳಿಯ ಜನಸಾಮಾನ್ಯರ ಭಾವ-ಭಾವನೆಗಳನ್ನು ಜನಪದ ಲಯಗಳೊಂದಿಗೆ ಹೊಂದಿಸಿ ಕಾವ್ಯ ಹೊಸೆದರು. ಅಲ್ಲಿಯ ಕವಿತೆಗಳೆಲ್ಲವೂ ಹಾಡುಗಳು. ಅಥವಾ ನಾದವೇ ಈ ಕವಿತೆಗಳಿಗೆ ಜೀವ ತುಂಬುತ್ತದೆ. ಈ ಸಂಕಲನಕ್ಕೆ ಮುನ್ನುಡಿ ಬರೆದಿರುವ ಚನ್ನವೀರ ಕಣವಿಯವರು ಇವರನ್ನು ಜನಪದ ಸತ್ವವನ್ನು ಸಹಜವಾಗಿಯೇ ಮೈಗೂಡಿಸಿಕೊಂಡು ಬೆಳೆದ, ಜಾನಪದ ಜೀವನ ಸೌಂದರ್ಯದಿಂದ ಸ್ಫೂರ್ತಿಪಡೆದ ಕವಿಯೆಂದು ಗುರುತಿಸಿರುವರು. 'ಹೊಳಿಸಾಲ ಬಳ್ಳಿ' ಜಾನಪದ ಜೀವನ ಸೌಂದರ್ಯದ ನೆಲೆಯ ಪ್ರೇಮ ಮೀಮಾಂಸೆ. ಅವರು "ಹಳ್ಳಿಗನ ಮುಗ್ಧ ತಿಳುವಳಿಕೆ, ಗಂಭೀರ ವ್ಯಾವಹಾರಿಕತೆ, ನೈಸರ್ಗಿಕ ಸಹಜತೆಗಳಿಂದಲೇ ಇಡೀ ಜೀವನವನ್ನು ಕಂಡು ಅನುರಕ್ತಿಯ ಮಾತುಗಳನ್ನು ಪೋಣಿಸುತ್ತಾರೆ."[೬] ಅಲ್ಲಿಯ ಕವಿತೆಗಳೆಲ್ಲ ಭಾವುಕ ನೆಲೆಯಲ್ಲಿ ಮೂಡಿದ ಪ್ರೇಮಗೀತೆಗಳು ಒಟ್ಟಿನಲ್ಲಿ ಸಾಂಸ್ಕೃತಿಕ ಚಳುವಳಿಂತೊಂದರ ವಿಶಿಷ್ಟ ಘಟ್ಟದಲ್ಲಿ ನಿಂತು ಪ್ರೀತಿಯೆಡೆಗೆ ಮುಖಮಾಡಿದ ಇಟ್ಟಣ್ಣವರ ಕಾವ್ಯದ ಅಧ್ಯಯನವೇ ಕುತೂಹಲಕಾರಿಯಾದುದು. ಬಂಡಾಯದ ಅರುಣೋದಯದಲ್ಲಿ ಕಾವ್ಯಕ್ಷೇತ್ರದಲ್ಲಿ 'ಬಳ್ಳಿ' ಹರಡಿದ ಈ ಕಾವ್ಯದ ಬೇರು ಇರುವುದೇ ಮಣ್ಣಿನಲ್ಲಿ. ಕಾರಣ ಬದುಕು ಇರುವುದು ಹೊಳೆಯ ದಂಡೆಯಲ್ಲಿ, ನಾದ ಇರುವುದು ಜನರ ಕಂಠದಲ್ಲಿ, ಗಮನವಿರುವುದು ಹಳ್ಳಿಗರ ಬದುಕಿನ ಪ್ರೇಮ ಮಿಡಿತದಲ್ಲಿ.

ಡಾ. ಇಟ್ಟಣ್ಣವರ ಕನ್ನಡ ಕಾವ್ಯದ ಅಭ್ಯಾಸಿ. ಅವರಿಗೆ ನಮ್ಮ ಕಾವ್ಯ ಪರಂಪರೆಯ ಸಂಪೂರ್ಣ ಅರಿವಿದೆ. ಹೀಗಿದ್ದೂ ತನ್ನ ಸಮಕಾಲೀನ ಸಂದರ್ಭದಿಂದ ದೂರನಿಂತು ಕಾವ್ಯಕ್ಕೆ ಪ್ರೇಮವನ್ನು ಬಳಸಿಕೊಂಡಿದ್ದು ವೈರುಧ್ಯದಂತೆ ಕಂಡರೂ ಅವರಿಗದು ಸಹಜವಾಗಿತ್ತು. ಒಬ್ಬ ಕವಿ ಇಂಥದ್ದೇ ಕಾವ್ಯ ರಚಿಸಬೇಕೆಂಬ ಕಟ್ಟಳೆ ಹಾಕಿದರೆ ಕಾವ್ಯ ಹುಟ್ಟುವುದೇ ಇಲ್ಲ. ಕಲೆಗಾಗಿ ಕಲೆಯೋ ಅಥವಾ ಬದುಕಿಗಾಗಿ ಕಲೆಯೋ ಎಂಬ ಚರ್ಚೆ ಇಂದಿಗೂ ಮುಕ್ತಾಯ ಕಂಡಿಲ್ಲ. "ತಾತ್ವಿಕತೆಯಿರುವ ಸಾಹಿತ್ಯವು ಕೇವಲ ಭಾವನಾತ್ಮಕವಾಗಿರುವುದಿಲ್ಲ ಅಥವಾ ಕೇವಲ ಭೌದ್ಧಿಕವಾಗಿರುವುದಿಲ್ಲ. ಕೇವಲ ಭಾವನಾತ್ಮಕತೆಯು

---

೫. ಬಂಡಾಯ ಸಾಹಿತ್ಯ : ಡಾ. ಬಸವರಾಜ ಸಬರದ : ಪುಟ-೬

೬. ಶ್ಯಾಮಸುಂದರ ಬಿದರಕುಂದಿ : ಗಾಲಿ ಉಳ್ಳತ್ತೈತಿ : ಕವನ ಸಂಕಲನದ ಬೆನ್ನುಡಿ.

ವಿವೇಕದಿಂದ ವಂಚಿತವಾದ ಅತಿಭಾವುಕತೆಯೋ, ಭಾವೋದ್ರೇಕವೋ ಆಗುವ ಅಪಾಯವಿರುತ್ತದೆ...... ಉತ್ತಮ ಸಾಹಿತ್ಯವು ಏಕಕಾಲಕ್ಕೆ ಸೃಜನಶೀಲವೂ ಚಿಂತನಶೀಲವೂ ಆಗಿರುತ್ತದೆ. ಚಿಂತನಶೀಲತೆಯಲ್ಲಿ ಸೃಜನಶೀಲತೆ, ಸೃಜನಶೀಲತೆಯಲ್ಲಿ ಚಿಂತನಶೀಲತೆಯನ್ನು ಒಳಗೊಳ್ಳುವ ಅಭಿವ್ಯಕ್ತಿ ವಿಧಾನವನ್ನು ರೂಢಿಸಿಕೊಳ್ಳುವುದು ಉತ್ತಮ ಸಾಹಿತ್ಯದ ಅಂತರ್ಗತ ಅಭೀಪ್ಸೆಯಾಗಿರುತ್ತದೆ."[೭]

ಶ್ರೀರಾಮ ಇಟ್ಟಣ್ಣವರ 'ಹೊಳಿಸಾಲ ಬಳ್ಳಿ'ಯಲ್ಲಿ ಭಾವೋದ್ವೇಗ ಮಾತ್ರವಲ್ಲ ತಾತ್ವಿಕ ಚಿಂತನೆಯೂ ಇದೆ. ಈ ಚಿಂತನೆಯ ಸ್ವರೂಪ ಅಪ್ಪಟ ಜಾನಪದೀಯ. ಬದುಕಿನ ಅರಿವು ಸರಳ ಮತ್ತು ನೇರ –

೧. ಸಂಸಾರದಾಗೇನೈತಿ
ಉಂಡುಟ್ಟು ಹೋಗೂದೈತಿ. [೮]

೨. ಯಾಕ ಯಾಕ ನೀ ನಾಚ್ತಿಯಾಕ
ಅನ್ನಿಸಿದಾಗ ಸಂಸಾರ ಸಾಕ
ನೆನಪಿನ ಬುತ್ತಿ ಬೇಕಽ ಬೇಕ
ಕರಗಸಬೇಕ ಕಷ್ಟದ ಬೆಟ್ಟಾ
ಇರೂದ ಎಲ್ಲಾ ಬದಕಿನ ಗುಟ್ಟಾ. [೯]

೩. ಸಂಸಾರಂಬೂದ ಸವಿಗವಿಮ್ಯಾಗ
ಸಾಗಸಬೇಕ ತಿಳಿವಳಿಕ್ಯಾಗ
ಮುಳುಗುವಾಗು ಈಸಬೇಕ
ಕೈಕೈ ತಂದ ತಳಕ ಹಾಕ. [೧೦]

ಬದುಕಿನ ಈ ಸರಳ ತಾತ್ವಿಕತೆ ಅವರ ಕಾವ್ಯದುದ್ದಕ್ಕೂ ಉಳಿದಿದೆ ಎಂದಲ್ಲ, ಸಂಕಲನದಿಂದ ಸಂಕಲನಕ್ಕೆ ಶ್ರೀರಾಮ ಇಟ್ಟಣ್ಣವರ ತಾತ್ವಿಕತೆ ಬದಲಾಗುತ್ತ ಹೋಗುತ್ತದೆ. 'ಗಾಲಿ ಉಳ್ಳತೈತಿ' ಸಂಕಲನದಲ್ಲಿ ಕವಿ ಸಮಾಜ ಮುಖಿಯಾಗುತ್ತಾರೆ. ಅನಂತರ 'ಹೊತ್ತು ಮೂಡುವ ಸಮಯ'ದಲ್ಲಿ ಸಂಪೂರ್ಣ ಅಂತರ್ಮುಖಿ. ಪ್ರೇಮದ ಹಾಡು ಹಾಡುವಾಗ ಜನಮುಖಿಯಾಗುವರು. ಹೀಗಾಗಿ 'ಹೊತ್ತು ಮೂಡುವ ಸಮಯ'ದಲ್ಲಿ ಹಾಡುಗಳು ವಿರಳವಾಗಿ ಕವಿತೆಗಳು ಅರಳುತ್ತವೆ.

ಇವರ ಕಾವ್ಯ ಒಂದು ಸಿದ್ಧಾಂತದ ಪ್ರಣಾಳಿಕೆಯಾಗಿ ವಹಿಸುವುದಿಲ್ಲ. ಇವರು ಕುವೆಂಪು, ಮಧುರಚೆನ್ನ, ಬೇಂದ್ರೆ, ಕಣವಿ, ಶಿವರುದ್ರಪ್ಪನವರ ಪರಂಪರೆಯಲ್ಲಿ ಮುಂದುವರೆದವರು. ಸಹೃದಯನಿಂದ ವಿಮುಖಗೊಂಡ ನವ್ಯದ ವೈಫಲ್ಯವನ್ನು ಮನಗಂಡು ಕಾವ್ಯವನ್ನು ಜನಸಂವಹನಗೊಳಿಸಿದವರು. ಅವರು ಕವನ ಸಂಕಲನಗಳಿಗಿಂತ ಹಾಡುಗಳ ಮೂಲಕ ಜನರಿಗೆ ಹೆಚ್ಚು ಹತ್ತಿರಾದವರು. ಅವರ

---

೭. ಬರಗೂರು ರಾಮಚಂದ್ರಪ್ಪ : ಸಂಸ್ಕೃತಿ : ಶ್ರಮ ಮತ್ತು ಸೃಜನಶೀಲತೆ : ಪುಟ–೧೩೩–೧೩೪
೮. ತಿರಸೆಟ್ಟಿಗಂಡ : ಹೊಳಿಸಾಲ ಬಳ್ಳಿ : ಪುಟ–೬
೯. ಇಲ್ಲೇ ಅಲ್ಲೇನ : ಹೊಳಿಸಾಲ ಬಳ್ಳಿ : ಪುಟ–೧೬
೧೦. ನಾನು ನೀನು ಗಂಡಾ ಹೇಂತಿ : ಹೊಳಿಸಾಲ ಬಳ್ಳಿ : ಪುಟ–೩೬

ಕವಿತೆಗಳು ಜನಪದ ಗೀತೆಗಳಂತೆ ಉತ್ತರ ಕರ್ನಾಟಕದುದ್ದಕ್ಕೂ ಹರಡಿವೆ. ರೈಲಿನಲ್ಲಿಯ ಭಿಕ್ಷುಕನಿಂದ ಮೊದಲು ಮಾಡಿ ಶ್ರೇಷ್ಠ ಗಾಯಕರ ಕಂಠದಿಂದಲೂ ಅವರ ಹಾಡು ಬಿತ್ತರಗೊಂಡಿವೆ. ಅವರದು ಹಾಡುವ ಕಾವ್ಯ; ಕೇಳುವ ಕಾವ್ಯ, ಕ್ವಚಿತ್ತಾಗಿ ಓದುವ ಕಾವ್ಯ. ಇವು ಇಟ್ಟಣ್ಣವರ ಕಾವ್ಯ ಸಂವಹನದ ಬಹು ಆಯಾಮಗಳು, "ಶ್ರವಣಮಾತ್ರದಿಂದ ಸಹೃದಯ ಹೃದಯದಲ್ಲಿ ಕಿವಿಯಿಂದೀಟಿಸುವ ಕಾವ್ಯ." ಅದೊಂದು ಜನತೆಯೊಂದಿಗಿನ ಪ್ರೇಮಕುಶಲವಾಣಿ.

ಇಟ್ಟಣ್ಣವರ ಕಾವ್ಯ ಮೊಳೆತದ್ದೇ ಮೊದಲು ಹಾಡಿನಲ್ಲಿ. ಹಾಡುಗಾರರಾಗಿರುವ ಅವರು ತಾವೇ ಹಾಡು ಬರೆದು ಹಾಡಿದಾಗ ದೊರೆತ ಅದ್ಭುತ ಜನಸ್ಪಂದನೆಯಿಂದ ಪ್ರೇರಣೆ ಪಡೆದು 'ಹೊಳಿಸಾಲ ಬಳ್ಳಿ' ಹರವಿದವರು. ಅವರ ಕಾವ್ಯ ಹಾಡಾಗಲು ಅನೇಕ ಕಾರಣಗಳುಂಟು. ಕವಿ ಜಾನಪದೀಯ ಹಿನ್ನಲೆಯಿಂದ ಬಂದಿರುವುದು, ಹಾಡುಗಾರಿಕೆಯ ಹವ್ಯಾಸ ಸ್ವಭಾವತಃ ಬೆಳೆಸಿಕೊಂಡಿರುವುದು, ಜನಪದ ಸಾಹಿತ್ಯದೊಂದಿಗೆ ನಿರಂತರ ನಂಟು ಹೊಂದಿರುವುದು. ಇಟ್ಟಣ್ಣವರ ಜನಪದ ಸಾಹಿತ್ಯದ ವಾರಸುದಾರರು. ಅವರದು ಲಾವಣ್ಯದ ಕಾವ್ಯ. "ಎಲ್ಲೋ ಒಂದೆರಡು ಕಡೆ ಆಧುನಿಕ ಪ್ರಜ್ಞೆಯ ಗಾಳಿ ಸೋಂಕಿದಂತೆನಿಸಿದರೂ ಒಟ್ಟಿನಲ್ಲಿ ಇದು ಜನಪದ ಕಾವ್ಯ ಪರಂಪರೆಯಿಂದ ಭಿನ್ನವಾದುದಲ್ಲ."[೧೧] 'ಹೊಳಿಸಾಲ ಬಳ್ಳಿ'ಯ ಮುನ್ನುಡಿಯಲ್ಲಿ ಇವರ ಕಾವ್ಯದ ಭವಿಷ್ಯದ ಕುರಿತು ಅಂದು ಕಣವಿಯವರು ಹೇಳಿದ ಆ ಮಾತುಗಳು ಅವಲೋಕಿಸದಿರಲಾಗದು. "ಈ ಕವಿಯ ಬೆಳವಣಿಗೆಯ ಬಗ್ಗೆ ಈಗಲೇ ಏನನ್ನು ಹೇಳಬರುವಂತಿಲ್ಲ. ಆದರೂ ಅದು ಈ ಜಾನಪದ ಪರಂಪರೆಯ ಯಥಾರ್ಥವನ್ನು ಕಾಯುವುದರಲ್ಲಿರದೆ ಅದನ್ನು ಆಧುನಿಕ ಪ್ರಜ್ಞೆಗೆ ಒಗ್ಗಿಸಿ ಮೇಳವಿಸಿಕೊಳ್ಳುವದರಲ್ಲಿದೆ."[೧೨] ಬೇಂದ್ರೆಯವರ ತರುವಾಯ ಚಂದ್ರಶೇಖರ ಕಂಬಾರ ಅದನ್ನು ಸಾಧಿಸಿದರು. ಜಾನಪದದ ಮಿತ್, ಲಯಗಳನ್ನು ಆಧುನಿಕ ಪ್ರಜ್ಞೆಗೆ ಒಗ್ಗಿಸಿಕೊಂಡು 'ಚಕೋರಿ'ಯಂಥ ಶ್ರೇಷ್ಠ ಕಾವ್ಯವನ್ನು ಕೊಟ್ಟರು. ಡಾ. ಇಟ್ಟಣ್ಣವರಿಗೆ ಆ ಪ್ರಮಾಣದಲ್ಲಿ ಅದು ಸಾಧ್ಯವಾಗಲಿಲ್ಲವೆಂಬುದು ಸ್ಪಷ್ಟ. ಜನಪದ ಭಾಷೆ-ಭಾವ-ವಸ್ತುಗಳನ್ನು ಇವರಿಗಿಂತಲೂ ಹೆಚ್ಚು ಸಮರ್ಥವಾಗಿ ದುಡಿಸಿಕೊಂಡುವರು ಬೆಟಗೇರಿ ಕೃಷ್ಣಶರ್ಮ. ಆದರೆ ಈ ವಿಷಯದಲ್ಲಿ ಇಮ್ರಾಪೂರ ಅವರಿಗಿಂತಲೂ ಇಟ್ಟಣ್ಣವರ ಮೇಲು. 'ಹೊಳಿಸಾಲ ಬಳ್ಳಿ'ಯಿಂದ ಹೊರಬಂದು 'ಗಾಲಿ ಉಳಿಸ'ಲು ಪ್ರಯತ್ನಿಸಿದರು. ಶ್ಯಾಮಸುಂದರ ಬಿದರಕುಂದಿಯವರು ಹೇಳುವಂತೆ ಭಾವುಕತೆಗೆ ವಿಚಾರಶೀಲತೆಯ ಹೆಪ್ಪು ಹಾಕಿದರು. ಬಳ್ಳಿ ಮತ್ತು ಗಾಲಿಗಳ ನಡುವಿನ ಅಂತರ ಹದಿನಾಲ್ಕು ವರ್ಷ. 'ಹಳಿ ಬಾಂವಿಗೆ ಪಂಪ ಕೂಡ್ರಿಸಿ ತ್ವಾಟಾ ಮಾಡುವ' ಕೆಲಸಕ್ಕೆ ಕೈ ಹಾಕಿದರು. 'ಶಾಂತಿ ಚಿಗರಿ'ಯಲ್ಲಿ ಆ ಎಲ್ಲ ಭರವಸೆಗಳನ್ನು ತುಂಬಿದರು. ಗಾಂಧೀಜಿಯವರ ಅಹಿಂಸಾವಾದ ಚಿಗರಿಯಲ್ಲಿ ಕಟ್ಟಿದರು. ಆದರೆ 'ಚಿಗರಿ' ಕಳೆದುಕೊಂಡಿತು.

**ಎಲ್ಲಿ ಹುಡುಕುನಿನ್ನಾ ಚಿಗರಿ**
**ಕಳಕೊಂಡೈತೊ ಅಣ್ಣಾ.** [೧೩]

ಶಾಂತಿ ಚಿಗರಿಯೊಂದಿಗೆ ಕಾವ್ಯ ಜಿಂಕೆ ಕೂಡ ಕವಿಯ ಕೈಯಿಂದ ಕೊಸರಿಕೊಂಡಿತು. ನಾಲ್ಕು

---

೧೧. ಚನ್ನವೀರ ಕಣವಿ : ಹೊಳಿಸಾಲ ಬಳ್ಳಿ (ಮುನ್ನುಡಿ) : ಪುಟ-iii
೧೨. ಅದೇ. ಪುಟ-ix
೧೩. ಶಾಂತಿ ಚಿಗರಿ : ಗಾಲಿ ಉಳತೈತಿ : ಪುಟ-೨೯

ವರ್ಷಗಳ ನಂತರ ಮತ್ತೆ ಪ್ರೇಮದ ಹಾಡು ಹಾಡಿದರು. ಚೆಂದದ ಪಾರಿವಾಳದ ಗೆಳೆತನ ಬೆಳೆಸಿದರು.

'ಹೊಳಿಸಾಲ ಬಳ್ಳಿ' ಹಾಗೂ 'ಹಾಡುಣು ಬಾರಃ ಪ್ರೇಮದ ಹಾಡಾ' ಪ್ರೇಮ ಗೀತೆಗಳ ಸಂಕಲನಗಳು. "ಹೊಸಗನ್ನಡದಲ್ಲಿ 'ಪ್ರಣಯ'ವನ್ನೇ ಪ್ರಧಾನ ವಸ್ತುವನ್ನಾಗಿಸಿಕೊಂಡು ಬರೆದಂಥ ಕವಿಗಳಲ್ಲಿ ತೀ. ನಂ. ಶ್ರೀ. ಮೊದಲಿಗರು. ಅವರ ಒಲುಮೆ ಕವನ ಸಂಕಲನದಲ್ಲಿ ಅಂಥ ಕವಿತೆಗಳಿವೆ."[೧೪] 'ಮುಗ್ಧ ಪ್ರಣಯಿಗಳ ಸರಸ-ಸಲ್ಲಾಪ, ವಿರಹ ವೇದನೆ, ಎಳೆಹರೆಯದ ಪತಿ-ಪತ್ನಿಯರ ಸಕ್ಕರೆಯ ಸವಿಗನಸು, ಪ್ರಣಯದ ಫಲವಾದ ಪುಟ್ಟ ಕಂದನ ಆಟಪಾಟಗಳ ಹೃದಯಂಗಮ' ಕಾವ್ಯ-ಕೆ.ಎಸ್. ನರಸಿಂಹಸ್ವಾಮಿಯವರ 'ಮೈಸೂರು ಮಲ್ಲಿಗೆ'. ಕೆ.ಎಸ್.ನ ಕನ್ನಡದ "ದಾಂಪತ್ಯ ಕವಿ." ಬೇಂದ್ರೆ, ಕುವೆಂಪು ಪ್ರೇಮಕವನ ರಚಿಸಿದ್ದಾರೆ. ಮೈಸೂರು ಮಲ್ಲಿಗೆ ಅರಳಿದುದು ೧೯೪೭ ರಲ್ಲಿ. ಆ ಮುಂಚೆಯೇ ಅಂದರೆ ೧೯೩೭ ರಲ್ಲಿ ಬೇಂದ್ರೆಯವರ 'ಸಖೀಗೀತ' ಪ್ರಕಟವಾಗಿತ್ತು. ಆದರೂ ಪ್ರೇಮಲೋಕ ನೆನಪಾದೊಡನೆ ಕೆ.ಎಸ್. ನರಸಿಂಹಸ್ವಾಮಿ ಎದೆತುಂಬುತ್ತಾರೆ. "ಮೈಸೂರು ಮಲ್ಲಿಗೆಯನ್ನು ತಂಗಾಳಿಗೊಡ್ಡಿದ ನರಸಿಂಹಸ್ವಾಮಿಯವರ ಪ್ರತಿಭೆ ಅಪ್ಸರೆಯಂತೆ. ಈ ಲಾವಣ್ಯವು ಮಣ್ಣು ನೆಲದಿಂದ ಬಂದುದಲ್ಲ ಎನಿಸಿಬಿಟ್ಟಿದೆ. ಕವಿಯ ಸ್ವಾಭಾವಿಕ ಸುಕುಮಾರ ಸಂವೇದನೆ ಇಲ್ಲಿ ಕಾವ್ಯ ಸೌಂದರ್ಯವಾಗಿ ಅರಳಿರುವುದೊಂದು ಸೋಜಿಗ. ಕನ್ನಡದಲ್ಲಿ ಪ್ರಣಯವೊಂದನ್ನೇ ಪ್ರಮುಖ ವಸ್ತುವಾಗಿ ಸ್ವೀಕರಿಸಿ ಗೆದ್ದ ಕವಿ ಕೆ.ಎಸ್.ನ ಅವರೊಬ್ಬರೇ" ಎಂದಿರುವವರು ವರಕವಿ ಬೇಂದ್ರೆ.[೧೫]

"ಬೇಂದ್ರೆ-ಕುವೆಂಪು ಇಬ್ಬರಲ್ಲೂ ದಾಂಪತ್ಯ ಮತ್ತು ಪ್ರೇಮದ ಕುರಿತ ಗಮನಾರ್ಹ ತಾತ್ವಿಕ ಚಿಂತನೆಯಿದೆ. ಅದು ಅವರ ಸೃಜನಶೀಲ ರಚನೆಗಳಲ್ಲೂ ಅವರ ವ್ಯಕ್ತಿತ್ವದಲ್ಲೂ ಅವಿನಾಭಾವ ಅಂಶದಂತೆ ಇದೆ."[೧೬] 'ಸಖೀಗೀತ' ಬೇಂದ್ರೆ ಬದುಕಿನ ಖಂಡ ಕಾವ್ಯ. "ಅದು ಪ್ರಾತಿನಿಧಿಕವಾಗಿ ಬೇಂದ್ರೆಯವರ ಪ್ರೇಮ ಸಿದ್ಧಾಂತವನ್ನು ದಾಂಪತ್ಯಾಂತರ್ಗತ ಪ್ರೇಮವನ್ನು ತನ್ನ ಕಲಾಬಂಧದಲ್ಲಿ ವಿವರಿಸಲೆತ್ನಿಸುತ್ತದೆ. ಸಖೀಗೀತಕ್ಕೆ ಬೇಂದ್ರೆಯವರು ಬರೆದ ಮುನ್ನುಡಿ ಅವರ ಪ್ರೇಮತತ್ವದ ಮೀಮಾಂಸೆ."[೧೭] ಬೇಂದ್ರೆಯುವರ 'ನಾನು ಬಡವಿ' ಕನ್ನಡದ ಸರ್ವೋತ್ಕೃಷ್ಟ ಪ್ರೇಮಗೀತೆಗಳಲ್ಲೊಂದು.

ಕುವೆಂಪು ಸ್ವಭಾವತಃ ನಿಸರ್ಗ ಪ್ರೇಮಿ. ಬದುಕಿನ ಬೇಸರನ್ನು ಪ್ರಕೃತಿಯ ಮಡಿಲಲ್ಲಿ ಮರೆಯುವರು.

**ಅಲ್ಲಿಗೈದುವೆನಲ್ಲಿಗೈದುವೆನಿಲ್ಲಿ ಬೇಸರವಾಗಿದೆ;**
**ಕಾಡುಮಲೆಗಳನಲೆವ ಹುಚ್ಚಿನ ಕಿಚ್ಚು ಹೃದಯದಿ ರೇಗದೆ!**
**ಹೋಗುವೆನು ನಾ ಹೋಗುವೆನು ನಾ ನನ್ನ ಒಲುಮೆಯ ಗೂಡಿಗೆ;**
**ಹಸಿರು ಸೊಂಪಿನ ಬಿಸಿಲು ತಂಪಿನ ಗಾನದಿಂಪಿನ ಗೂಡಿಗೆ!**

ಪಕ್ಷಿಕಾಶಿಯೇ ಕವಿಯ ನೆಮ್ಮದಿಗೆ ತಾಣವಾಗಿದ್ದರೂ ಅವರ ಕಾವ್ಯದಲ್ಲಿಯೂ ಪ್ರೇಮದ ಕರೆಯಿದೆ–

---

೧೪. ಕೆ.ಚಿ.ರಾ. ಗೋವಿಂದ ರಾಜು : ಕೆ.ಎಸ್. ನರಸಿಂಹಸ್ವಾಮಿ : ಪುಟ–೧೨
೧೫. ಅದೇ. ಪುಟ–೧೩
೧೬. ಕೆ.ಪಿ. ನಟರಾಜ–ಕುವೆಂಪು ಮತ್ತು ಬೇಂದ್ರೆ ಕಾವ್ಯ : ಒಂದು ತೌಲನಿಕ ನೋಟ(ಲೇ) : ಕುವೆಂಪು : ಒಂದು ಪುನರಾನ್ವೇಷಣೆ : ಪುಟ–೯೯
೧೭. ಅದೇ.

ಕೊರಗತಿತ್ತು ಹೃಚ್ಚಕೋರ ಚಂದ್ರಚಾರು ಚಿಂತೆ;
ಹಾಲುಬೆಳಕು ಹೊಳೆಯ ಹರಿಸಿ ಬಂದು ಮುಂದೆ ನಿಂತೆ
ರೋಮ ರೋಮದಲ್ಲಿ ರಸದ ಮಿಂಚು ಹರಿಯುವಂತೆ ಓ ಪ್ರಾಣಕಾಂತೆ. [೧೮]

ಕುವೆಂಪು ಪ್ರೇಮಗೀತೆಗಳ ಮೊದಲ ಸಂಕಲನ 'ಪ್ರೇಮಕಾಶ್ಮೀರ' ಪ್ರಕಟಗೊಂಡದ್ದು ೧೯೪೬ ರಲ್ಲಿ. ಅನಂತರ ಕ್ರಮವಾಗಿ ಷೋಡಶಿ (೧೯೪೭), ಜೇನಾಗುವಾ (೧೯೫೨), ಚಂದ್ರಮಂಚಕೆ ಬಾ ಚಕೋರಿ (೧೯೫೪), ಅನುತ್ತರಾ (೧೯೬೫) ಪ್ರಕಟಗೊಂಡವು. "ಬೇಂದ್ರೆಯವರ ಪ್ರೇಮ ಮೀಮಾಂಸೆಯಲ್ಲಿ 'ಭಾರತೀಯರ ಜೀವನದಲ್ಲಿಯೂ ಕಾವ್ಯದಲ್ಲಿಯೂ ದಾಂಪತ್ಯ ಪ್ರಣಯಕ್ಕೆ ಸ್ಥಾನವಿಲ್ಲ' ಎಂಬ ಉಲ್ಲೇಖಗಳನ್ನು ಕುವೆಂಪು ಪ್ರಣೀತ ದಾಂಪತ್ಯದ ಪ್ರೇಮಕಾವ್ಯವು ಮೀರಿಸುವಂತಿದೆ. ಅಲ್ಲಿನ ಉತ್ಸಾಹ, ಆರಾಧನೆ, ಪ್ರೇಮ ಮತ್ತು ವಿರಹದ ದೈವಿಕ ವಿಕಾಸವು ದಾಂಪತ್ಯ ಪ್ರಣಯದ ಹಲವು ಮುಖಗಳನ್ನು ತೆರೆದಿಡುತ್ತದೆ."[೧೯]

೧೯೫೮ ರಲ್ಲಿ 'ನಲ್ವಾಡುಗಳು' ಬಂತು. ಪ್ರೀತಿಯ ಬೇರೆ ಬೇರೆ ಸಂವೇದನೆಗಳು ಅಲ್ಲಿದ್ದವು. "ತಾರುಣ್ಯ ಪ್ರಾರಂಭದ ಸ್ತ್ರೀ–ಪುರುಷರ–ನೈಸರ್ಗಿಕ ಆಕರ್ಷಣೆಯಿಂದ ಮೊದಲು ಮಾಡಿ, ದಾಂಪತ್ಯ ಜೀವನದ ಪರಿಪಕ್ವ ಹೃದಯದವರೆಗೆ–ಪ್ರೀತಿಯ ಬೇರೆ ಬೇರೆ ಸ್ವರೂಪಗಳು ಇಲ್ಲಿಯ ಗೀತಗಳಲ್ಲಿ ಪ್ರಕಟವಾಗಿವೆ."[೨೦] ಅದು ಜಾನಪದ ಜೀವನ ಸೌಂದರ್ಯದ ಆಶೆ–ಅಪೇಕ್ಷೆಗಳ ಭಾವ ಪ್ರಕಾಶನ.

ಕಡಲಿ ಮಾರಾಟಕ್ಕ ಗೊಡಚಿ ಜಾತ್ರಿಗೆ ಹೋಗಿ
ಬೆಡಗಿಯೊಬ್ಬಳನ ಪ್ಯಾಟ್ಯಾಗ
ಬೆಡಗಿಯೊಬ್ಬಳನ ಪ್ಯಾಟ್ಯಾಗ ಕಂಡಾಗ
ಹುಡುದಿ ಹಾಕಿದಳೊ ಮನದಾಗ! [೨೧]

ಹುಡುದಿಯಿಂದ ಮಡದಿವರೆಗೆ, ಮಡದಿಯಿಂದ ಮಹಾದಾಯಿಯವರೆಗೆ ಹೆಣ್ಣು ಎದೆಯಳತೆ ಹಾಗೂ ಮೋಜಿನಾಟದ ಪುರುಷ ಭಾವದ ಬಹುರೂಪಗಳ ಮಿಡಿತಗಳು ಇದರಲ್ಲಿವೆ.

ಮೈಸೂರು ಮಲ್ಲಿಗೆ, ನಾಲ್ವುಡುಗಳ ತರುವಾಯ ಆ ಸಂಪ್ರದಾಯ ಮುಂದುವರೆಸಿದ್ದು, ಡಾ. ಸೋಮಶೇಖರ ಇಮ್ರಾಪುರ ಅವರ "ಗಂಡ ಹೆಂಡಿರ ಜಗಳ ಗಂಧ ತೀಡಿದ್ಹಾಂಗ". ೧೯೬೧ ರಲ್ಲಿ ಪ್ರಕಟಗೊಂಡ ಇದು ಆ ವರ್ಷ ರಾಜ್ಯಸಾಹಿತ್ಯ ಆಕಾಡೆಮಿ ಪ್ರಶಸ್ತಿ ಗಳಿಸಿತು. "ಹಳ್ಳಿಯ ಬಾಳಿನ ಹಲವಾರು ಪ್ರೇಮ ಸನ್ನಿವೇಶಗಳನ್ನು ಸಂಸಾರಿಕ ಜೀವನದ ಸರಸ–ವಿರಸಗಳನ್ನು ಅಲ್ಲಿಯ ಪರಿಹಾಸದೊಂದಿಗೆ ನಿರಾಯಾಸವಾಗಿ ಪಡೆಮೂಡಿಸುವ ಕವಿತೆಗಳು ಇಲ್ಲಿವೆ." [೨೨]

---

೧೮. ಶ್ರದ್ಧೆ–ಶಾಂತಿ : ಕುವೆಂಪು ಸಮಗ್ರ ಕಾವ್ಯ, ಸಂಪುಟ–೭ ಪುಟ–೨೮
೧೯. ಕೆ.ಪಿ.ನಟರಾಜ–ಕುವೆಂಪು ಮತ್ತು ಬೇಂದ್ರೆ ಕಾವ್ಯ : ಒಂದು ತೌಲನಿಕ ನೋಟ(ಲೇ) :
ಕುವೆಂಪು : ಒಂದು ಪುನರನ್ವೇಷಣೆ : ಪುಟ–೧೦೩
೨೦. ಆನಂದ : ನಲ್ವಾಡುಗಳು : ಮೊದಲ ಮಾತು : ಪುಟ–iv-v.
೨೧. ನಲ್ವಾಡುಗಳು : ಪುಟ–೩
೨೨. ಕಣವಿ : ಗಂಡ ಹೆಂಡಿರ ಜಗಳ ಗಂಧ ತೀಡಿದ್ಹಾಂಗ (ಸಂಗ್ರಹ ಕುರಿತು) : ಬೇವುಬೆಲ್ಲ : ಪುಟ–೪೦

ಪ್ರೇಮ ಪರುಷಕ ಕಾಮ ಕೂಡಿದೆ
ರಾಗ ಸೂಸತsದ
ಸೂರ್ಯ ಚಂದ್ರರ ಕಳಿಸಿ ತಾರೆ ತಾ
ಮಿನುಗಿ ಹೊಳೆಯುತsದ
ಪಿರುತಿ
ತಾಲ ಹಾಕತsದ. [೨೩]

ಆನಂದಕಂದರ ನಲ್ವಾಡುಗಳು, ಇಮ್ರಾಪುರರ ಗಂಡಹೆಂಡಿರ ಜಗಳ ಗಂಧ ತೀಡಿದ್ಹಾಂಗ ಸಂಕಲನಗಳ ಪ್ರೇರಣೆಯ ಮೂಸೆಯಲ್ಲಿ ಮೂಡಿದ ಪ್ರೇಮಗೀತೆಗಳ ಸಂಕಲನ ಡಾ. ಇಟ್ಟಣ್ಣವರ ಹೊಳಿಸಾಲ ಬಳ್ಳಿ. ಗಂಡಹೆಂಡಿರ ಜಗಳದ ಗಂಧ ಬಿಡಿಸಿಕೊಂಡು ಬೆಳೆದದ್ದು ಹೊಳಿಸಾಲ ಬಳ್ಳಿ. ಅದು ಗಂಧಕ್ಕಿಂತ ಹೆಚ್ಚು ಸುಗಂಧಿತವಾಗಿದೆ. ಮೈಸೂರು ಮಲ್ಲಿಗೆಯಿಂದ ಮೊದಲುಗೊಂಡು ಗಂಡಹೆಂಡಿರ ಜಗಳದವರೆಗೂ ರಚಿತಗೊಂಡ ಕವಿತೆಗಳು ದಾಂಪತ್ಯಗೀತೆಗಳೇ. ವಿವಾಹಪೂರ್ವ ಪ್ರೇಮದ ಅಪ್ಪಟ ಪ್ರೇಮದ ಕಾವ್ಯ ಕನ್ನಡಕ್ಕೆ ಮೊದಲು ಕೊಟ್ಟವರು ಡಾ. ಶ್ರೀರಾಮ ಇಟ್ಟಣ್ಣವರ. ಹದಿನೆಂಟು ವರ್ಷಗಳ ನಂತರ 'ಹಾಡುಣು ಬಾರs ಪ್ರೇಮದ ಹಾಡಾ' ಸಂಕಲನ ತಂದರು. ಅದನ್ನು ಮಡದಿ ಸರೋಜಾಳಿಗೆ ಅರ್ಪಿಸಿದರು. ಇದರಲ್ಲಿ ವಿವಾಹಪೂರ್ವ ಪ್ರಣಯ, ದಾಂಪತ್ಯ ಪ್ರೇಮ, ಕುಟುಂಬ ವಾತ್ಸಲ್ಯ ಹಾಗೂ ಸಖ್ಯಗೀತೆಗಳೂ ಇವೆ.

ಆನಂದಕಂದರ ನಲ್ವಾಡುಗಳು ಸಂಕಲನದಲ್ಲಿಯೂ ವಿವಾಹ ಪೂರ್ವ ಪ್ರಣಯಗೀತೆಗಳಿವೆ. ಆದರೆ ಇಟ್ಟಣ್ಣವರಲ್ಲಿ ಪ್ರಣಯ ಸ್ಪಂದನಗಳು ಕೇವಲ ಸಾಂಸ್ಥಿಕ ಬಂಧನಕ್ಕೆ ಬದ್ಧಗೊಳ್ಳದೆ ನಿಸರ್ಗ ಸಹಜವಾಗಿ ಅಭಿವ್ಯಕ್ತಗೊಳ್ಳುತ್ತವೆ.

ಹ್ಯಾಂಗೋ ಏನೋ ಒಂದಾಗೀವ
ಮನಸ ಮನಸ ಮೆಚ್ಚಿ
ಹಾಡೂಣು ಗಲ್ಲಗಲ್ಲ ಹಚ್ಚಿ
ನಾಳಿನ ಗೋಳಾ ನೆನಸೂದ ಬ್ಯಾಡs
ಛೀ ನನ್ನ ಹುಚ್ಚಿ
ಬಾಳೂಣು ಪ್ರೀತಿ ಹಣ್ಣ ಕಚ್ಚಿ. [೨೪]

'ಗರದಿಗಮ್ಮತ'ದ ಈ ಗತ್ತು ಎಲ್ಲ ಪ್ರಣಯಗೀತೆಗಳಲ್ಲಿ ಕಾಣುವುದಿಲ್ಲ. ಒಂದೆರಡು ಕಡೆಗಳಲ್ಲಿ ಸಾಂಸ್ಥಿಕ ಸೀಮೋಲ್ಲಂಘನೆಯ ಮಿಂಚು ಕಾಣುತ್ತದೆ. ಬಹುಪಾಲು ಪ್ರಣಯ ಗೀತೆಗಳು ನೈತಿಕ ಕೇಂದ್ರದಲ್ಲಿಯೇ ನಿಲ್ಲುತ್ತವೆ. ಯಾವುದೇ ಒಂದು ತಾತ್ವಿಕ ಬದ್ಧತೆಗೆ ಒಳಗಾಗುವುದಿಲ್ಲ. ಆ ಮನಸ್ಸುಗಳು ಜಾನಪದೀಯ ಸಾಂಪ್ರದಾಯಿಕ ಪರೀದಿಯಿಂದ ಹೊರಬರುವುದಿಲ್ಲ.

---

೨೩. ಮಾರೀ ತಿರುವಿದ್ಯಾಕ : ಗಂಡ ಹೆಂಡಿರ ಜಗಳ ಗಂಧ ತೀಡಿದ್ಹಾಂಗ : ಬೇವು-ಬೆಲ್ಲ : ಪುಟ-೬೭
೨೪. ಹಾಡುನ ಬಾರs ಪ್ರೇಮದ ಹಾಡಾ : ಪುಟ-೨

**ಹಾದ್ಯಾಗ ಬೀದ್ಯಾಗ ತಡದರ ಜೀವಾ**
**ಜಲ್ಲಂಬುದ ನನಗ**
**ಹೆಣ್ಣಿನ ತಲಿ ಮ್ಯಾಲ ಹರಲಿ ಬರತಾವ**
**ಕಬರೆಲ್ಲಿ ಇಂವಗ.** [೨೫]

ಇಲ್ಲಿಯ ಹುಡುಗಿಗೆ 'ಬೂದಿಗಾಗಿ ಬಂಗಾರ ಕಳೆದುಕೊಳ್ಳುವ' ಮನಸ್ಸಿಲ್ಲ. ಅದಕ್ಕಾಗಿ ಚೆಂದದ ಪಾರಿವಾಳ ಅಂಗಳದ ಗೂಡಿನಿಂದ ಹಾರಿಹೋಗುತ್ತದೆ. ವಿವಾಹಪೂರ್ವ ಪ್ರಣಯಕ್ಕೆ ಇಲ್ಲಿಯೂ ಪುರಸ್ಕಾರವಿಲ್ಲದಿರುವುದನ್ನು ಹಿಂದೆಯೇ ಚರ್ಚಿಸಲಾಗಿದೆ. ಪ್ರೇಮದ ಹಾಡಿನಲ್ಲಿ ಆರಂಭವಾಗುವ ಪ್ರಣಯದಾರಿ ಕವಲುಹಾದಿಯಲ್ಲಿ ಕೊನೆಗೊಳ್ಳುತ್ತದೆ.

ಇಟ್ಟಣ್ಣವರ ಪ್ರಣಯ ಗೀತೆಗಳಲ್ಲಿ ಮನೋವಿಶ್ಲೇಷಣೆ ಅಷ್ಟಾಗಿ ಕಾಣುವುದಿಲ್ಲ. ಅದರಲ್ಲೂ ಹೆಣ್ಣಿನ ಮನಸ್ಸಿನ ನೋವುಗಳು ತುಡಿಯುವುದಿಲ್ಲ. ಪ್ರೀತಿಸಿದ ಹುಡುಗಿ ಮನೆಯವರ ಒತ್ತಾಯಕ್ಕೆ ತನ್ನ ಮೊದಲ ಪ್ರೀತಿಯನ್ನು ಹೂತು ಸೆರಗಿನಲ್ಲಿ ಕಣ್ಣೀರು ತುಂಬಿ ಮತ್ತೊಬ್ಬನನ್ನು ಮದುವೆಯಾದಾಗ ಪ್ರಿಯಕರ ಅವಳಿಗೆ –

**ಸಂಗಾತಿಯೊಡಗೂಡಿ ತುಂಬು ಸಂತಸದಿಂದ**
**ಬಾಳದೋಣಿಯನೇರಿ ತೀರಸೇರು;**
**ಅನವರತ ಹಾಲ್ಜೇನ ಹೊಳೆಯಲ್ಲಿ ಮೀಯುತಿರು**
**ಇದು ನನ್ನ ಹರಕೆ ಸುಖಿಯಾಗಿರು.** [೨೬]

–ಎಂದು ಹಾರೈಸುವುದರಲ್ಲಿ ದಬ್ಬಾಳಿಕೆಯ ಪುರುಷ ಮನೋಧರ್ಮ ವ್ಯಕ್ತವಾಗುತ್ತದೆ. ಹೆಣ್ಣಿನ ನೋವುಗಳು ಅವನಿಗೆ ಅರ್ಥವಾಗುವುದಿಲ್ಲ. ಅಂಗಳದ ಗೂಡಿನಲ್ಲಿಯೇ ಪಾರಿವಾಳವನ್ನು ಸಾಕಬೇಕೆನ್ನುವುದು ಪುರುಷ ದೌರ್ಜನ್ಯ. ಅದೇ ಸಂದರ್ಭದಲ್ಲಿ ಪಡಸಾಲೆಗೆ ಬರಬೇಕನ್ನುವ ಪಾರಿವಾಳದ ತುಡಿತವೂ ಸಾಂಪ್ರದಾಯಕ. ಈ ಕವಿ ಹೆಣ್ಣನ್ನು ನವೋದಯದ ನೆಲೆಯಲ್ಲಿಯೇ ಇಟ್ಟು ನೋಡಿದರು. "ದಾಂಪತ್ಯದ ಚೌಕಟ್ಟಿನೊಳಗೆ ಚೆಂದದ ಉಡುಗೆ ತೊಡುಗೆಗಳಲ್ಲಿ ಅವಳನ್ನು ಕೂರಿಸಿ ಆಕೆಯ 'ಅನುಸರಿಸುವ' ಮನೋಧರ್ಮವನ್ನು ದೀಪ್ತಗೊಳಿಸಿದ ಈ ಅಲೆಗಳು ಆಕೆಯ ನಿಷ್ಕಪಟ, ನಿರ್ಮಲವಾದ ಮುಗ್ಧ ಪ್ರೇಮದ ಆರಾಧನೆ ಮಾಡುತ್ತ ಆಕೆಯ ಪುರುಷ ಪ್ರಣೀತ ಸ್ವಭಾವಗಳು ಢಾಳವಾಗಿ ಹೊಳೆಯುವಂತೆ ಮಾಡಿದವು. ಇದರಿಂದಾಗಿ ಆಕೆಯನ್ನು 'ಕೇವಲ ಹೆಣ್ಣಾಗಿ' ಕಾಣುವ ಆಕೆಯ ವ್ಯಕ್ತಿತ್ವದ ಅಂತರಂಗವನ್ನು ಶೋಧಿಸುವ ಕ್ರಿಯೆ ನಡೆಯಲಿಲ್ಲ." [೨೭] ಎಂದು ಡಾ. ಸತ್ಯನಾರಾಯಣ ಮಲ್ಲಿಪಟ್ಟಣ ಹೇಳುವ ಮಾತುಗಳನ್ನು ಇಲ್ಲಿ ಸ್ಮರಿಸಬಹುದು. ಇಟ್ಟಣ್ಣವರ ಕಾವ್ಯದ ಪ್ರಣಯಿಗಳು ಹಳ್ಳಿಯ ಮುಗ್ಧರು. ಅಲ್ಲಿ ಮುಗ್ಧತೆ ಮಡುಗಟ್ಟಿದೆ, ವೈಚಾರಿಕ ಹೊಳಪು ತೋನೆಯುವುದಿಲ್ಲ. ಪ್ರೇಮ ಜೀವನದ ಬೆಡಗು–ಶೃಂಗಾರ ಲೀಲೆಯ ಬೆರಗು ಚಕಿತಗೊಳಿಸುವವು

---

೨೫. ಬ್ಯಾಡ ಅಂದರೂ ಬೆನ್ನ ಹತ್ತತಾನ : ಹಾಡುಣು ಬಾರs ಪ್ರೇಮದ ಹಾಡಾ : ಪುಟ–೮
೨೬. ಹಾರೈಕೆ : ಹೊಳೆಸಾಲ ಬಳ್ಳಿ : ಪುಟ–೩೦
೨೭. ಡಾ. ಸತ್ಯನಾರಾಯಣ ಮಲ್ಲಪಟ್ಟಣ : ಮಹಿಳಾ ಕಾವ್ಯದ ವಿಭಿನ್ನ ಧ್ವನಿಗಳು(ಲೇ):
ಕನ್ನಡ ಸಾಹಿತ್ಯ ಮತ್ತು ಮಹಿಳೆ : ಪುಟ–೧೦೬

ವಿನಾ ಹೊಸದಾರಿ ದರ್ಶಿಸುವುದಿಲ್ಲ. 'ಮೈಸೂರು ಮಲ್ಲಿಗೆ'ಯಲ್ಲೂ ಅಷ್ಟೇ. ಕೆ.ಎಸ್.ಎನ್. ಅವರ "ಕಾವ್ಯದ ಭಾಷೆ ಆಡುಮಾತಿಗೆ ಸಮೀಪವಾದ ಶಿಷ್ಟ ಭಾಷೆಯಂತೆ ತೋರಿದರೂ ಕವನದ ನಾಯಕ–ನಾಯಕಿಯರೆಲ್ಲ ಮಧ್ಯಮ ವರ್ಗದ ಪ್ರತಿನಿಧಿಗಳು: ಗ್ರಾಮೀಣ ನೆಲೆಯಿಂದ ಬಂದವರು. ನವಿಲೂರ ಚೆಲುವೆ, ನವವಿವಾಹಿತೆ, ಶಾರದೆ, ಗೌರಿ, ರಾಯರ ಪದುಮ – ಇವರೆಲ್ಲಾ ಹಳ್ಳಿಯ ಶಾಂತ ಜೀವನದ ಸಂತೃಪ್ತ ರಮಣಿಯರು. ನಮ್ಮ ಸಂಸ್ಕೃತಿಯ ಸಾಂಪ್ರದಾಯಿಕ ಸ್ತ್ರೀ ಮಾದರಿಗಳು." ೨೮

ದಾಂಪತ್ಯಗೀತೆಗಳಲ್ಲಿ ಇಟ್ಟಣ್ಣವರ ಗಂಡ–ಹೆಂಡಿರ ಸಾಮರಸ್ಯದಲ್ಲಿ ಸಮಾನತೆ ಹೊಸೆಯಲು ಪ್ರಯತ್ನಿಸಿದ್ದಾರೆ.

**ಗಂಡಸ ದೇವರಲ್ಲ**
**ಹೆಣ್ಣ ದಾಸಿsಯಲ್ಲ**
**ಇಬ್ಬರೀಗೂ ಪ್ರೀತಿsನ ದೇವರ ಆದ**
**ಬಡ್ಡಿ ಬೇರಿನ್ಹಾಂಗ ಆಧಾರ. ೨೯**

ಈಗ ಸಮಾನತೆ ಇಷ್ಟಕ್ಕೆ ಸೀಮಿತವಾಗಿ ಉಳಿದಿಲ್ಲ. ಸ್ತ್ರೀವಾದಿ ಚಿಂತನೆ ಬೆಳೆದಿದೆ. "ಹೆಣ್ಣು ಇಡೀ ಬದುಕನ್ನು ಕುಟುಂಬಕ್ಕಾಗಿ ಸವೆಸುವುದರಲ್ಲಿ ಸಾರ್ಥಕ ಪಡೆಯುವ ಕಾಲವೊಂದಿತ್ತು. ಈಗ ಅದರಲ್ಲಿ ಸ್ವ–ಸಂತೋಷ ಕಾಣದಾಗಿ; ಗೃಹದಾಸ್ಯ ಅನುಭವಿಸಿ ಅದರಿಂದ ಹೊರಬರಲು ಹಾತೊರೆಯುತ್ತಿದ್ದಾಳೆ ; ಮಾತೃತ್ವ, ಪತ್ನಿತ್ವಗಳಿಂದ ಕಳಚಿಕೊಂಡು ಪುರುಷನಂತೆ ತನ್ನ ಶಿಕ್ಷಣ ಉದ್ಯೋಗಗಳಲ್ಲಿ ಯಶಸ್ಸನ್ನು ಬಯಸತೊಡಗಿದ್ದಾಳೆ."೩೦ "ಆರ್ಥಿಕ ಸ್ವಾತಂತ್ರ್ಯ–ವೃತ್ತಿ ಪರತೆಗಳು, ಕುಟುಂಬ, ಮಾತೃತ್ವದ ಅನಿವಾರ್ಯತೆಯನ್ನು ಬದಿಗೊತ್ತುತ್ತ ಹೋಗುತ್ತವೆ..... ವೈಯಕ್ತಿಕತೆ ಅಕೌಂಟುಬಿಕತೆಯೆಡೆಗೆ ಮಹಿಳೆ ಸಾಗುತ್ತಿದ್ದಾಳೆ."೩೧ ನಿಜ, ಈ ತಾತ್ವಿಕತೆಯನ್ನು ನಾವು ಪ್ರೇಮಗೀತೆಗಳಲ್ಲಿ ಅಪೇಕ್ಷಿಸಲಾಗದು. ಈ ಚಿಂತನೆಯ ನೆಲೆಯೇ ಬೇರೆ ; ಪ್ರಣಯಗೀತೆಗಳ ತಾತ್ವಿಕತೆಯೇ ಬೇರೆ. ಅವೆರಡು ಪರಸ್ಪರ ವೈರುದ್ಧದ ನೆಲೆಗಳು.

ಇಟ್ಟಣ್ಣವರ ಕಾವ್ಯದ ಕೇಂದ್ರ ಕಾಳಜಿ ಕೌಟುಂಬಿಕ ನೆಲೆಗಳನ್ನು ಗಟ್ಟಿಗೊಳಿಸುವುದು. ವಾತ್ಸಲ್ಯಪೂರ್ಣ ಸಮಾಜ ನಿರ್ಮಿಸುವುದು. ಈ ಆಶಯ ಅವರ ಪ್ರೇಮ, ದಾಂಪತ್ಯ, ಕುಟುಂಬ ವಾತ್ಸಲ್ಯ, ಶಿಶುಗೀತೆಗಳಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ನಿಸರ್ಗ ಪ್ರೀತಿ ಕೌಟುಂಬಿಕ ಪ್ರೇಮಕ್ಕೆ ಹಿನ್ನೆಲೆಯಾಗಿ ಮೂಡುತ್ತದೆ.

ಸಾಂಸ್ಥಿಕ ಸಂಕರ್ಷಣದ ಜೊತೆಜೊತೆಯ ಇಟ್ಟಣ್ಣವರಲ್ಲಿ ಸಾಮಾಜಿಕ ಪ್ರಜ್ಞೆ ಮೂಡುತ್ತದೆ. ಗ್ರಾಮ ಬದುಕು V/S ನಗರೀಕರಣದ ಸಂಘರ್ಷವು ಸಾಂಸ್ಥಿಕ ಸಂಕರ್ಷಣಕ್ಕೆ ಕಾರಣವಾಗುತ್ತದೆ. 'ಗಾಲಿ ಉಳ್ಳತ್ರೈತಿ' ಸಂಕಲನದ ಬಹುಪಾಲು ಕವಿತೆಗಳಲ್ಲಿ ಇದನ್ನು ನೋಡುತ್ತೇವೆ. 'ಹೊತ್ತು ಮೂಡುವ

---

೨೮. ಎನ್. ಗಾಯತ್ರಿ : ನವೋದಯ ಸಾಹಿತ್ಯದಲ್ಲಿ ಸಂಸ್ಕೃತಿಯ ವಿಕಾಸ ವಸ್ತು ಸ್ತ್ರೀ(ಲೇ) : ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ : ಪುಟ–೯೯

೨೯. ಪ್ರೀತಿsನ ಹೆಚ್ಚಿಂದ : ಹಾಡುಣು ಬಾರs ಪ್ರೇಮದ ಹಾಡಾ : ಪುಟ–೨೬

೩೦. ಹೇಮಾ ಪಟ್ಟಣಶೆಟ್ಟಿ : ಆಧುನಿಕ ಮಹಿಳಾ ಕಾವ್ಯ(ಲೇ) : ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ : ಪುಟ–೮೧

೩೧. ವಿಜಯಾ ದಬ್ಬೆ : ಮಹಿಳಾ ಸಾಹಿತ್ಯದಲ್ಲಿ ಪ್ರತಿಭಟನೆ(ಲೇ) : ಮಹಿಳೆ ಸಾಹಿತ್ಯ ಸಮಾಜ

ಸಮಯ'ದಲ್ಲಿ ಸೂರ್ಯನ ಮುಖಕ್ಕೆ ಎರಚುವ ರಕ್ತದಲ್ಲಿ ತೆಪ್ಪಗೆ ತೊಯ್ದ ಪೇಪರಗಳು ಕವಿಯ ಸಾಮಾಜಿಕ ಕಳಕಳಿಗೆ ಕನ್ನಡಿ ಹಿಡಿಯುತ್ತವೆ. 'ಹೊತ್ತು ಮೂಡುವ ಸಮಯ' ಡಾ. ಇಟ್ಟಣ್ಣವರ ಕಾವ್ಯಪಥದ ಮೈಲಿಗಲ್ಲು, ಕಾವ್ಯಧೋರಣೆಯ ವಿಶಿಷ್ಟ ತಿರುವು. ಸಾಮಾಜಿಕ ಸಾಮರಸ್ಯದ ಚಿಂತನೆಯನ್ನು ಹೊತ್ತ ಹೊತ್ತು ಅವರ ಕಾವ್ಯ ಪ್ರಪಂಚದ ಬೆಳಗೂ ಹೌದು. ಇಲ್ಲಿಯ 'ಕುರಿಕಾಯುವ ಕರಿಯಪ್ಪ' ಕವಿಯ ಪ್ರಖರ ವೈಚಾರಿಕತೆಯನ್ನು ಪ್ರತಿನಿಧಿಸುತ್ತಾನೆ.

ಬಂಡಾಯವೆಂದರೆ ಶೋಷಣೆಯ ಸಾಂಪ್ರದಾಯಿಕ ಕಟ್ಟಳೆಗಳನ್ನು ಮೀರುವ ಮನೋಧರ್ಮ. ಇದು ಕುರಿಕಾಯುವ ಕರಿಯಪ್ಪನ ಬಡಿಗೆಗೆ ಬಂದುದು ಕಾಲಧರ್ಮ. ಬರಗೂರು ರಾಮಚಂದ್ರಪ್ಪ ಹೇಳುವಂತೆ "ನಮ್ಮ ಕಾಲಘಟ್ಟದಲ್ಲಿ ಹೆಪ್ಪುಗಟ್ಟಿದ್ದ ಮೌನಕ್ಕೆ ಮಾತುಕೊಡುವ ಕ್ರಿಯಾಶೀಲತೆಯ ಫಲವೇ 'ಬಂಡಾಯ ಸಾಹಿತ್ಯ'. ಮಾತಿನ ನಡುವೆ ಬೆಳೆಯುತ್ತ ಬರುವ ಮೌನದ ಒಗಟನ್ನು ಒಡೆಯುವ ಕ್ರಿಯೆ ಚರಿತ್ರೆಯ ಒತ್ತಡದಲ್ಲೇ ಉಂಟಾಗುತ್ತದೆ."[೩೨]

ಇಟ್ಟಣ್ಣವರ ಕಾವ್ಯದಲ್ಲಿ ಬಂಡಾಯದ ಕಾವಿದೆ. ಪ್ರಣಯದ ತಾತ್ವಿಕತೆಯಲ್ಲೂ ಬಂಡಾಯವಿದೆ. ಇಂದಿನ ಸಾಂಸ್ಥಿಕ-ಸಾಂಸ್ಕೃತಿಕ ಸ್ಥಿತ್ಯಂತರಗಳ ಕುರಿತ ಪ್ರತಿಕ್ರಿಯೆಯಲ್ಲಿ ವೈಚಾರಿಕ ತೀಕ್ಷ್ಣತೆಯಿದೆ.

ಈಗ ಬಂಡಾಯ ಚಳವಳಿಗೆ ಮೊದಲಿನ ಬಿಸಿಯಿಲ್ಲ. ಕೆಂಡಗಳ ಸುತ್ತೆಲ್ಲ ಬೂದಿ ಬೆಳೆದಿದೆ. ಈ ಚಳುವಳಿಯ ವೈಫಲ್ಯದ ಮೊದಲ ಕಾರಣ ಮುಂದಾಳುಗಳ ವೈಯಕ್ತಿಕ ಸ್ವಾರ್ಥದ ದುರಾಶೆ. ಮನುಷ್ಯ, ವ್ಯವಸ್ಥೆಯ ವ್ಯಾಮೋಹಕ್ಕೆ ಬಲಿಯಾದ ಮೇಲೆ ಸಾಂಸ್ಥಿಕ ಪ್ರಜ್ಞೆಯನ್ನು ಕಳೆದುಕೊಳ್ಳುತ್ತಾನೆ. ವ್ಯವಸ್ಥೆಯ ಗುಲಾಮನಾಗುತ್ತಾನೆ. ಆಗ ವ್ಯವಸ್ಥೆ ಗೆಲುವಿನ ನಗೆ ಚೆಲ್ಲುತ್ತದೆ–

**ಬೆಣ್ಣೆಯಲ್ಲಿ ಕೂದಲೆಳೆ ತೆಗೆದಂತೆ**
**ಬರೆಯುವ ನಮ್ಮನ್ನು ಸುಮ್ಮನಾಗಿಸುವ**
**ಸೂತ್ರಧಾರರು.**
**ಆ ಪ್ರಶಸ್ತಿ ಈ ಪ್ರಶಸ್ತಿ**
**ಸದಸ್ಯತ್ವ, ಅಧ್ಯಕ್ಷ ಹುದ್ದೆ**
**ಕೊಟ್ಟು ಬಿಡುತ್ತಾರೆ**
**ಕಾಡುವ ದೇವರ ಸುಮ್ಮನಾಗಿಸುವಂತೆ**
**ಕಾಯಿ ಒಡೆದು,**
**ಇಷ್ಟಾದರೆ ಕುಳಿತು ಬಿಡುತ್ತೇವೆ ನಾವೂ**
**ಒಂದೆರಡು ವರ್ಷ ಗಪ್ಪುಗಡದು.** [೩೩]

ಬಂಡಾಯ ಚಳುವಳಿಯ ಸ್ಥಗಿತದ ಶೂನ್ಯ ಕಾಲದಲ್ಲಿ ಮೂಡಿದ ಈ ಕವಿತೆ ಸಾಹಿತ್ಯದ ಪುನರ್ ಮೌಲ್ಯೀಕರಣದತ್ತಗಮನ ಸೆಳೆಯುತ್ತದೆ. ಹತ್ತು ಹಲವು ದೃಷ್ಟಿಗಳಿಂದ ಇಟ್ಟಣ್ಣವರ 'ಹೊತ್ತು ಮೂಡುವ ಸಮಯ' ಮುಖ್ಯವಾಗುತ್ತದೆ. ಅಲ್ಲಿಯ ಸಮುದಾಯದ ಹಿತ, ಸಾಮರಸ್ಯದ ತುಡಿತ,

---

೩೨. ಬರಗೂರು ರಾಮಚಂದ್ರಪ್ಪ : ಬಂಡಾಯ ಸಾಹಿತ್ಯ ಮೀಮಾಂಸೆ(ಲೇ) :
ಕನ್ನಡ ಸಾಹಿತ್ಯ ಮೀಮಾಂಸೆ : ಪುಟ-೪೪೩, ೪೪೬.

೩೩. ಕರೆಗಂಟೆ : ಹೊತ್ತು ಮೂಡುವ ಸಮಯ : ಪುಟ-೯

ಬಂಡಾಯದ ಬಿಸಿ, ಸಾಂಸ್ಥಿಕ–ಸಾಂಸ್ಕೃತಿಕ ಕರ್ಷಣ–ಎಲ್ಲವೂ ಚಿಂತನೆಗೆ ಒತ್ತಾಯಿಸುತ್ತವೆ. ಪ್ರಣಯದ ಹಾಡುಗಳು ಇಲ್ಲಿಲ್ಲ; ಸಾಂಸ್ಕೃತಿಕ ಹೆಜ್ಜೆಗಳಿವೆ. ನಗರೀಕರಣದ ನೆಪದಲ್ಲಿ ಊರ ಮಧ್ಯೆ 'ಸ್ಮಶಾನ' ಸೃಷ್ಟಿಸಿದ ದುಸ್ಸಾಹಸದ ಚರ್ಚೆಯಿದೆ, ಮಳಲ ಮನೆ ಬಿಟ್ಟು ಬದುಕಿನ ಚರಮಗೀತೆ ಹಾಡುತ್ತಿರುವ ಅನಾಥರ ಸಂಕಟವಿದೆ, ಬೇವು–ಬೆಲ್ಲ ಬೆರೆಯದ ಯುಗಾದಿಯ ಉಸಿರುಗಟ್ಟಿಸುವ ಬಿಸಿಲಿದೆ, ನಟ್ಟು ಕಡಿಯುವ ಹುಡುಗನ ಬೆವರಿದೆ, 'ಸತ್ತು ಸಾಯದೆ । ಉರಿಯುತ್ತಿರುವ ಮೇಣಬತ್ತಿಯ ಬೆಳಕು ನುಂಗಿ ಹಬ್ಬುತ್ತಿರುವ ಕತ್ತಲೆಯ ಸಂಘರ್ಷವಿದೆ. 'ಊರು–ಕೇರಿಗಳಲ್ಲಿ । ಬಯಲು ಬಾಂದಳದಲ್ಲಿ । ಹಬ್ಬಿರುವ ನಂಜಿನ ಮಂಜು' ಮುಸುಕಿದ್ದರೂ ಬೆಳ್ಳಿ ಬೆಳಕಿನ ಭರವಸೆಯಿದೆ. ದಟ್ಟ ಕತ್ತಲಲ್ಲಿಯೂ ಅಲ್ಲಲ್ಲಿ ಬೆಳಗುತ್ತಿರುವ ಸಾಂಸ್ಕೃತಿಕ ಹಣತೆಗಳ ಬೆಳಕಿದೆ. ಮುಳುಗುವ ಸಂಜೆ ಮಂಜಾವಿಗೆ ಮುನ್ನುಡಿ ಬರೆಯಬಹುದೆಂಬ ಆಶೆ ಚಂದ್ರನಲ್ಲಿ ಮೂಡಿ ನಿಂತಿದೆ. ಇಟ್ಟಣ್ಣವರ ಕಾವ್ಯದಲ್ಲಿ ಬದುಕು ಹಸನಾಗಿಸುವ ಜೀವನದಿ ಪ್ರವಹಿಸುತ್ತಿದೆ. "ನಮ್ಮ ಸಮಕಾಲೀನ ಬದುಕು ಇದೀಗತಾನೆ ಉದ್ಭವವಾದದ್ದಲ್ಲ. ಅದರ ಹಿಂದೆ ಇತಿಹಾಸವೇ ಇದೆ. ಯಾಕೆಂದರೆ ನಮ್ಮ ಸಾಮಾಜಿಕ ಸ್ವರೂಪಕ್ಕೆ ಇವತ್ತಿನ ಅಂಶಗಳೊಂದಿಗೆ ಹಿಂದಿನ ಇತಿಹಾಸದ ಅಚ್ಚೂ ಬಿದ್ದಿದೆ. ಧರ್ಮ, ಪ್ರಭುತ್ವ, ಆರ್ಥಿಕ ವ್ಯವಸ್ಥೆ, ದುಡಿಮೆ– ಇವೆಲ್ಲ ಹೇಗೆ ಕೆಲಸ ಮಾಡಿವೆ, ಯಾವ ಯಾವ ಸ್ಥಾನ ಪಡೆದಿವೆ ಎಂಬುದು ಒಂದು ಸಮಾಜದ ಬದುಕನ್ನು ಕಂಡುಕೊಳ್ಳಲು ಸಹಾಯಕ ಸಾಮಗ್ರಿ. ಆದ್ದರಿಂದ ಐತಿಹಾಸಿಕ ಮತ್ತು ಸಮಕಾಲೀನ ಸ್ಥಿತಿಗತಿಗಳ ವೈಜ್ಞಾನಿಕ ಅರಿವಿನಿಂದ ಬದುಕನ್ನು ಕಾಣುವ ಕ್ರಿಯೆ ಸಾಗಬೇಕು."[೩೪] ಆ ಆಶಯ ಇಲ್ಲಿ ಫಲಿಸಿದೆ. ಅದಕ್ಕೆ –

ಕವಿ ಇಟ್ಟಣ್ಣವರ ಜೀವನ ಮತ್ತು ಸಾಹಿತ್ಯ ಭಿನ್ನವೆಂದು ಭಾವಿಸುವವರಲ್ಲ. ಸಾಹಿತ್ಯ ಬಾಳಿನ ತಲೆಕಟ್ಟು, ಯಾವುದೋ ಒಂದು ಸಂದರ್ಭದ ಚೌಕಟ್ಟು ಅಲ್ಲ. ಹಸನಾದ ಬದುಕಿನ ಕವಿ ಮಾತ್ರ ಇಂಥ ಕಾವ್ಯ ಕೊಡಲು ಸಾಧ್ಯವಾಗುತ್ತದೆ. "ಉತ್ತಮ ಕೃತಿಯಲ್ಲಿ ಬಾಳನ್ನು ತಿದ್ದುವ ಶಕ್ತಿ ನೆರೆಯುವುದು ತಿದ್ದಬೇಕೆಂಬ ಉದ್ದೇಶದಿಂದಲ್ಲ. ಕರ್ತೃವಿನ ಬಾಳು ತಿದ್ದಿದ್ದಾದರೆ ಅವನ ಕೃತಿಯಲ್ಲಿ ಆ ಶಕ್ತಿ ತಾನಾಗಿ ಮೂಡುವುದು. ಕವಿಯ ಭಾವವಿಮೋಚನೆಗಾಗಿ ಪ್ರಕೃತವಾದ ಕೃತಿ, ಸಹೃದಯನಾದ ಓದುಗಾರನ ಮನಸ್ಸನ್ನು ಅವನರಿಯದಂತೆಯೇ ತಿದ್ದಿ ಬಿಡುತ್ತದೆ"[೩೫] ಎನ್ನುತ್ತಾರೆ ಮಾಸ್ತಿ. ಇಟ್ಟಣ್ಣವರದು ಹಸನು ಮನಸ್ಸಿನ ಹಸನು ಕಾವ್ಯ. ಶಾಂತಿ–ನೆಮ್ಮದಿ–ಸಾಮರಸ್ಯ–ಸಮೃದ್ಧಿಗಾಗಿ ತುಡಿಯುವ ಭಾವಪೂರ್ಣ ಕಾವ್ಯ..

ಹೃದಯವನ್ನು ಸ್ಪರ್ಶಿಸುತ್ತದೆ, ಭಾವನೆಗಳನ್ನು ನೇವರಿಸುತ್ತದೆ, ಪ್ರೀತಿಯನ್ನು ತೋರೆಯುತ್ತದೆ. ಈ ಸ್ಪರ್ಶಗುಣವೇ ಕಾವ್ಯದ ಮೌಲ್ಯವರ್ಧಿಸಿದೆ.

ನೂರು ಮಾತುಗಳಾಚೆ
ಒಂದು ಸ್ಪರ್ಶ
ಸ್ಪರ್ಶ ಅಮೃತ ಧಾರೆ. [೩೬]

---

೩೪. ಬರಗೂರು ರಾಮಚಂದ್ರಪ್ಪ : ಸಾಹಿತ್ಯ ಮತ್ತು ಧೋರಣೆ(ಲೇ)
: ಸಂಸ್ಕೃತಿ : ಶ್ರಮ ಮತ್ತು ಸೃಜನಶೀಲತೆ : ಪುಟ–೬೨

೩೫. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಜೀವನವನ್ನು ಕುರಿತು ಸಾಹಿತ್ಯ(ಲೇ)
: ಕನ್ನಡ ಸಾಹಿತ್ಯ ಮೀಮಾಂಸೆ : ಪುಟ–೧೦೩

ಒಲವು ತುಂಬಿದ ನಲ್ಲ ನಲ್ಲೆಯ ಕೆನ್ನೆ ನೇವರಿಸಿದಂತೆ, ವಾತ್ಸಲ್ಯದ ತಾಯಿ ಮಗುವಿನ ಕೆನ್ನೆಗೆ ಮುತ್ತಿಟ್ಟಂತೆ ಇಟ್ಟಣ್ಣವರ ಕಾವ್ಯ ನಮ್ಮನ್ನು ಸ್ಪರ್ಶಿಸುತ್ತದೆ.

**ನೊಂದ ಜೀವನ ತಬ್ಬಿ**
**ಒರೆಸಿದರೆ ಕಣ್ಣೀರು**
**ಸೃಷ್ಟಿಗೊಂಡಂತೆ ಗ್ರಂಥ ನೂರು.** [೩೭]

ಬರಗೂರು ರಾಮಚಂದ್ರಪ್ಪ ನಮ್ಮ ಸಾಹಿತ್ಯ ಮತ್ತು ಸಂಸ್ಕೃತಿಯಲ್ಲಿ ಪ್ರಧಾನವಾಗಿ ಮೂರು ಮಾದರಿಗಳನ್ನು ಗುರುತಿಸುವರು– "೧) ಜನರನ್ನು ಉದ್ದೇಶಿಸಿ ಮಾತನಾಡುತ್ತಲೇ ಹೋಗುವ ಉಪದೇಶ ಶೈಲಿ. ೨) ತನ್ನಲ್ಲಿ ತಾನೇ ಮುಳುಗಿ ಹೋಗುವ ಸ್ವಗತ ಶೈಲಿ. ೩) ಜನರ ಜೊತೆ ಮಾತಾಡುತ್ತಲೇ ತನ್ನೊಳಗೆ ಸಂವಾದಿಸುವ ಸಾಮಾಜಿಕ ಶೈಲಿ."[೩೮] ಅವರು ಈ ಮೂರರಲ್ಲಿ ಮೊದಲನೆಯದನ್ನು 'ಜಗದ್ಗುರು ಪರಂಪರೆ' ಎಂದೂ ಎರಡನೆಯದನ್ನು 'ಋಷಿ ಪರಂಪರೆ' ಯೆಂದೂ ಮೂರನೆಯದನ್ನು 'ಜನಪರಂಪರೆ'ಯೆಂದೂ ಹೆಸರಿಸುತ್ತಾರೆ. ಜಗದ್ಗುರು ಪರಂಪರೆ 'ಸಿಂಹಾಸನ ಶೈಲಿ'ಯ ಏಕಮುಖ ಪರಂಪರೆ. ಧ್ಯಾನಾತ್ಮಕ ನೆಲೆಯನ್ನು ಕಾಣುತ್ತಲೇ ಅದರಿಂದ ಹೊರಬರಲಾಗದೇ ಸ್ವಗತಗೊಳ್ಳುವುದು ಋಷಿ ಪರಂಪರೆ. ಮೇಲಿನ ಎರಡು 'ಅತಿ'ಗಳನ್ನು ಮೀರಿದ ಧರ್ಮ ಜನಪರಂಪರೆಯದು. ಇಟ್ಟಣ್ಣವರ ಕಾವ್ಯ ಜನಪರಂಪರೆಯ ಸಾಹಿತ್ಯ. ಅವರು ಹೊಳಿಸಾಲ ಬಳ್ಳಿ ಹಾಗೂ ಹಾಡುಣು ಬಾರs ಪ್ರೇಮದ ಹಾಡಾ ಸಂಕಲನಗಳಲ್ಲಿ ಜನರನ್ನು ಉದ್ದೇಶಿಸಿ ಮಾತಾಡುತ್ತಿರುವಂತೆ ಭಾಸವಾಗುತ್ತದೆ. ಆದರೆ ಜನರೊಂದಿಗಿನ ಸಂವಾದ ಮರೆಯುವುದಿಲ್ಲ. ಈ ಎರಡೂ ಸಂಕಲನದ ಕವಿತೆಗಳು ಹೆಚ್ಚಾಗಿ ಉಪದೇಶದೊಂದಿಗೆ ಕೊನೆಗೊಳ್ಳುತ್ತವೆ. ಆದರೆ ಅದು ಹೊರಗಿನ ಉಕ್ತಿಯಾಗದೇ ಒಳಗಿನ ತತ್ವವಾಗಿ ಮೂಡುವುದು.

**ಸಿಟ್ಟಾ ಸೆಡವಾ ಇರದಿರ ಬಾಳೆಕ**
**ಹತ್ತತೈತಿ ಜಂಗs**
**ಅವನಂಗ ನಡಕೋ ಜ್ವಾಕಿ ಮಾಡತಾನ**
**ಅಂಗೈ ಗಿಣಿಹಾಂಗ.** [೩೯]

ಜನಪದ ಸಾಹಿತ್ಯದಲ್ಲಿ ಇಂಥ ಮಾತುಗಳು ಹೇರಳ. ಇದು ಜನಪದ ಸಾಹಿತ್ಯದ ಲಕ್ಷಣಗಳಲ್ಲೊಂದು. ಬದುಕಿನ ರೀತಿಯ ನಿವೇದನೆಯೇ ಬೋಧನೆಯಾಗುತ್ತದೆ. ಇಟ್ಟಣ್ಣವರ ಕಾವ್ಯದ ಮತ್ತೊಂದು ವಿಶೇಷವೆಂದರೆ ಸ್ವಗತ ಶೈಲಿಯ ನಿರೂಪಣೆ. ಇದು ಕೂಡ ಜನಪದ ಸಾಹಿತ್ಯದ ಪ್ರಭಾವ. "ಮಾನವೀಯ ಭಾವನೆಯಿಂದ ಸಾಹಿತ್ಯ ಜೀವನದಲ್ಲಿ ಶ್ರದ್ಧೆಯನ್ನು ಭವಿಷ್ಯತ್ತಿನಲ್ಲಿ ಭರವಸೆಯನ್ನು ಹೊಂದಿರುತ್ತದೆ". ಬೇಂದ್ರೇಯವರ ಮಾತು ಬಳಸಿ ಹೇಳುವುದಾದರೆ ಇಟ್ಟಣ್ಣವರ ಕಾವ್ಯ ಹಿಗ್ಗಿನ

---

೩೬. ಸ್ಪರ್ಶ : ಹೊತ್ತು ಮೂಡುವ ಸಮಯ : ಪುಟ–೩
೩೭. ಅದೇ.
೩೮. ಬರಗೂರು ರಾಮಚಂದ್ರಪ್ಪ : ಬಂಡಾಯ ಸಾಹಿತ್ಯ ಮೀಮಾಂಸೆ(ಲೇ)
: ಕನ್ನಡ ಸಾಹಿತ್ಯ ಮೀಮಾಂಸೆ : ಪುಟ–೪೪೪
೩೯. ಹಳಹಳಸಿಯ ನಾಳೆ : ಹಾಡುಣ ಬಾರs ಪ್ರೇಮದ ಹಾಡಾ : ಪುಟ–೩೧

ಹಾಡು. ಆ ಹಿಗ್ಗು ಕೇವಲ ಅಭಿವ್ಯಕ್ತಿಯ ತಾಂತ್ರಿಕತೆಯಲ್ಲ ; ಆಸ್ವಾದ. ಅದನ್ನು ಅನುಭವಿಸಬೇಕು. ಒಂದಾಗಿ ಸರದೆಗೆದು, ಚೆಂದಾಗಿ ಹಾಡಿ, ಬದುಕು ಸಾರ್ಥಕಗೊಳಿಸಿಕೊಳ್ಳುವ ಪ್ರೇಮದ ಹಾಡುಗಳವು. ಅದು ಸಾಧ್ಯವಾಗದಿದ್ದರೆ ಕೇಳಬೇಕು. ಅದೂ ಸಾಧ್ಯವಾಗದಿದ್ದರೆ ಓದಬೇಕು. ಹಾಡುಗಳಿಗೆ ಓದು ಕೊನೆ ಅವಕಾಶ. ಹಾಡುಗಳನ್ನು ಹಾಡಾಗಳಾಗಿಯೇ ಆಸ್ವಾದಿಸಬೇಕು. ನಲ್-ವಾಡುಗಳ ನಂತರ ಜನಪದ ಜೀವನದ ಭಾವ ವೈಭವವನ್ನು ಮೂರ್ತೀಕರಿಸಿದ ಇಟ್ಟಣ್ಣವರ ಪ್ರೇಮಗೀತೆಗಳು ಉತ್ತರ ಕರ್ನಾಟಕದ ತುಂಬೆಲ್ಲ ನಿನಾದಿಸಿದವು. ಅವು ಆನಂದಕಂದರ ಗೀತೆಗಳಷ್ಟು ಸತ್ವಪೂರ್ಣವಾಗಿರಲಿಕ್ಕಿಲ್ಲ. ಆದರೆ ಅಲ್ಲಿಯ ಗೇಯತೆ. ಸರಳತೆ, ಸಹಜತೆ ಹೃದಯ ಚುಂಬಿಸಿತು. ಆನಂದಕಂದರರದು ಬ್ರಾಣ್ಕೆಯ ಜನಪದ ಭಾಷೆ ; ಇಟ್ಟಣ್ಣವರದು ಅಪ್ಪಟ ಜಾನಪದ ದರ್ಶನ. ಆನಂದಕಂದರ ನಲ್-ವಾಡುಗಳು, ಇಮ್ರಾಪೂರರ ಗಂಡಹೆಂಡಿರ ಜಗಳ ಗಂಧತೀಡಿದ್ಹಾಂಗ, ಇಟ್ಟಣ್ಣವರ 'ಹೊಳಿಸಾಲ ಬಳ್ಳಿ' ಹಾಗೂ 'ಹಾಡುಣು ಬಾರs ಪ್ರೇಮದ ಹಾಡಾ' ಸಂಕಲನಗಳ ಪ್ರೇಮಗೀತೆಗಳು ಇಂದಿಗೂ ಉತ್ತರ ಕರ್ನಾಟಕದ ಮನೆಮನೆಯ, ಮನ ಮನದ ಹಾಡುಗಳು.

# ಅಧ್ಯಾಯ – ೭

## ಸಮಾರೋಪ

ಕವಿ ಸಾಮಾಜಿಕ ಬದ್ಧತೆ ಹೊಂದಿರಬೇಕೆನ್ನುವುದರಲ್ಲಿ ಎರಡು ಮಾತಿಲ್ಲ. ಸಾಮಾಜಿಕ ಬದ್ಧತೆಯಿಲ್ಲದ ಕಾವ್ಯ ಕಾಗದದ ಹೂವು. ಆದರೆ ಸಾಮಾಜಿಕ ಬದ್ಧತೆಯ ಸ್ವರೂಪ ಕವಿಯಿಂದ ಕವಿಗೆ, ಕಾಲದಿಂದ ಕಾಲಕ್ಕೆ ಭಿನ್ನವಾಗಿರುತ್ತದೆ. ಕವಿ ಸಮಕಾಲೀನ ವೇದಿಕೆಯ ಮೇಲೆ ನಿಂತು ಸಾರ್ವಕಾಲಿಕ ದೃಷ್ಟಿ ಸಾಧಿಸಬೇಕು. ಕಾವ್ಯ ಕೇವಲ ಸಾಂದರ್ಭಿಕ ಸ್ಪಂದನೆಯಾಗಬಾರದು. "ರಸಋಷಿಯಾದ ಕವಿ ಅರ್ವಾಚೀನದ ಶಿಖರೇಶ್ವರದಲ್ಲಿ ನಿಂತು, ತನ್ನೊಂದು ಕೈಯನ್ನು ಮಸಗುತ್ತಲೆ ಕವಿದ ಪ್ರಾಚೀನದ ಗೋರಿಯೊಳಗೆ ನೀಡಿ ಹುಡುಕುತ್ತಿರುತ್ತಾನೆ, ಮತ್ತೊಂದು ಕೈಯನ್ನು ಅನಂತತೆಯ ಗಗನ ನೀಲಿಮೆ ತುಂಬಿರುವ ಭವಿಷ್ಯತ್ತಿನ ಅವ್ಯಕ್ತಗರ್ಭದ ಕಡೆಗೆ ಬಾಚಿ ತಡವುತ್ತಿರುತ್ತಾನೆ".[೧] ಇದರಿಂದಲೇ ಪಂಪ ಇಂದಿಗೂ ಪ್ರಸ್ತುತವಾಗುತ್ತಾನೆ. ಮಹಾಕಾವ್ಯಗಳ ಯುಗ ಮುಗಿಯಿತು ಎನ್ನುವ ಸಂದರ್ಭದಲ್ಲಿ ಕುವೆಂಪು 'ರಾಮಾಯಣ ದರ್ಶನಂ' ರಚಿಸಿದರು. ಡಾ. ಇಟ್ಟಣ್ಣವರ ನವ್ಯದ ಕೊನೆಯಂಚಿನಲ್ಲಿ ನಿಂತು 'ಪ್ರೇಮಗೀತೆ' ಹಾಡಿದರು. ಹಾಡು ಕವಿತೆಯಾಗುವುದಿಲ್ಲವೆಂಬ ಹೇಳಿಕೆ ಬಿಸಿ ಬಿಸಿ ಚರ್ಚೆ ಸೃಷ್ಟಿಸಿದ ಹೊತ್ತು 'ಹೊಳಿಸಾಲ ಬಳ್ಳಿ' ಬಂತು. ಮೇಲ್ನೋಟಕ್ಕೆ ಇದು ಅವರ ತಾತ್ವಿಕ ಬದ್ಧತೆಯ ಪ್ರಶ್ನೆ ಸೃಷ್ಟಿಸಬಹುದು. ಆಳವಾಗಿ ಆಲೋಚಿಸಿದಾಗ ಈ ಪ್ರಶ್ನೆಯೇ ಅಪ್ರಸ್ತುತವಾಗುವುದು. ಕೆಲವರು ಇಟ್ಟಣ್ಣವರ ನವೋದಯ ಧೋರಣೆಯ ಕವಿಯೆಂದು ಹೇಳುವುದೂ ಸೂಕ್ತವಲ್ಲ. ಪ್ರೇಮಗೀತೆಗಳೆಲ್ಲ ರಮ್ಯ ಕವಿತೆಗಳು, ನಿಜ. ಜನಪದ ಸಾಹಿತ್ಯದ ಲಕ್ಷಣಗಳಲ್ಲಿ ರಮ್ಯತೆಯೂ ಒಂದು. ಇಟ್ಟಣ್ಣವರ ಸಮಗ್ರ ಕಾವ್ಯ ಅವಲೋಕಿಸಿದಾಗ ಅವರು ಜಾನಪದೀಯ ಪರಂಪರೆಯ ಕವಿಯೆಂದು ಸ್ಪಷ್ಟವಾಗುತ್ತದೆ. ಅವರು ಕಲಿಯದಿದ್ದರೂ ಕವಿಯಾಗುತ್ತಿದ್ದರು, ಜನಪದ ಕಾವ್ಯ ಪರಂಪರೆಯನ್ನು ಮುಂದುವರೆಸುತ್ತಿದ್ದರು.

ಜಾನಪದೀಯ ಭಾವ ಸಂಪತ್ತು ಇಟ್ಟಣ್ಣವರ ಕಾವ್ಯ ಜೀವಾಳ. ಅವರ 'ಪ್ರೇಮಗೀತೆಗಳು' ಜನಪದ ಕಾವ್ಯದ ಪರಂಪರೆಯ ಮುಂದುವರಿಕೆ. ಶ್ಯಾಮಸುಂದರ ಬಿದರಕುಂದಿಯವರು ಹೇಳುವಂತೆ "ಜನಪದ ನುಡಿಗಟ್ಟಿನಲ್ಲಿ ತಮ್ಮ ಅನುಭವ ಅನಿಸಿಕೆಗಳನ್ನು ಹದವಾಗಿ ಹೆಣೆಯಬಲ್ಲ, ಮುದವಾಗಿ ಮುಟ್ಟಿಸಬಲ್ಲ ಕುಶಲತೆ ಅವರಿಗೆ ಕರಗತವಾಗಿತ್ತು."[೨] "ಅವರು ಹಳ್ಳಿಗನ ಮುಗ್ಧ ತಿಳುವಳಿಕೆ, ಗಂಭೀರ ವ್ಯವಹಾರಿಕತೆ, ನೈಸರ್ಗಿಕ ಸಹಜತೆಗಳಿಂದಲೇ ಜೀವನವನ್ನು ದರ್ಶಿಸುತ್ತಾರೆ."[೩]

---

೧. ಕುವೆಂಪು : ಹೊಸ ಸಾಹಿತ್ಯ ಮತ್ತು ಹೊಸ ದೃಷ್ಟಿ(ಲೇ) ಕನ್ನಡ ಸಾಹಿತ್ಯ ಮೀಮಾಂಸೆ : ಪುಟ–೮೦,೮೧

೨. ಶ್ಯಾಮಸುಂದರ ಬದರಕುಂದಿ : ಗಾಲಿ ಉಳ್ಳತೃತಿ : ಬೆನ್ನುಡಿ

೩. ಅದೇ.

ಸ್ವರ್ಗದ ಮಾತ್ಯಾಕ
ಭೂಮಿತಾಯಿ ಸಾಕ
ಬಾಳಿsಗಿ ಐಸಿರಿ ತೋರಸಾಕ. [೪]

ಅವರು ತಮ್ಮ ಕಾವ್ಯದಲ್ಲಿ ಜಾನಪದ ಪ್ರೀತಿಯ ಖಣಿ ತೋಡಿದವರು, ರಾಜಾ-ರಾಣಿ ಆಟ ಆಡಿದವರು. 'ಜುಳುಜುಳು ಝುರಿಗೆ ಶ್ರಾವಣದ ಸಿರಿಗೆ ಗುಣುಗುಣು ಹಾಡಿದ' ಬೇಂದ್ರೆ ಇವರ ಕಾವ್ಯದ ಪ್ರೇರಣೆ. ಕೆ.ಎಸ್.ನರಸಿಂಹಸ್ವಾಮಿಯವರ 'ಮೈಸೂರು ಮಲ್ಲಿಗೆ' ಸ್ಫೂರ್ತಿ, ಬೆಟಗೇರಿಯವರ 'ನಲ್ವಾಡುಗಳ' ಪ್ರಭಾವ. ಇಮ್ರಾಪೂರರ 'ಗಂಡ ಹೆಂಡಿರ ಜಗಳ ಗಂಧ ತೀಡಿದ್ಹಾಂಗ' ಸಂಕಲನದ ಅನುಸರಣೆ. ಅನುಸರಣೆ ಎಂದರೆ ಅನುಕರಣೆ ಎಂದು ಭಾವಿಸಕೂಡದು. ಪ್ರೇಮಗೀತೆಗಳ ಪರಂಪರೆಯ ಮುಂದುವರಿಕೆ. ಹೊಳಿಸಾಲ ಬಳ್ಳಿ ಇಮ್ರಾಪೂರರ 'ಗಂಡ ಹೆಂಡಿರ ಜಗಳ ಗಂಧ ತೀಡಿದ್ಹಾಂಗ' ಸಂಕಲನವನ್ನು ಮೀರಿ ನಿಲ್ಲುವುದರಲ್ಲಿ ಸಂದೇಹವಿಲ್ಲ. ಇದೇ ಮಾತನ್ನು 'ಹಾಡುಣು ಬಾರಃ ಪ್ರೇಮದ ಹಾಡಾ' ಸಂಕಲನದ ಕುರಿತು ಹೇಳಲಾಗುವುದಿಲ್ಲ. ಅಲ್ಲಿಯ ಬಹಳಷ್ಟು ಕವಿತೆಗಳಲ್ಲಿ 'ಹೊಳಿಸಾಲ ಬಳ್ಳಿ'ಯ ಪುನರಾವರ್ತನೆಯ ಛಾಯೆ ಮೂಡಿದೆ. ವಸ್ತು-ಭಾವ-ಭಾಷೆ-ನಾದ-ಲಯ ಎಲ್ಲವೂ ಅವೇ. 'ಪ್ರೇಮದ ಹಾಡು' ಹೊಳಿಸಾಲ ಬಳ್ಳಿಯಿಂದ ಭಿನ್ನವಾಗಿ, ನಾವಿಣ್ಯತೆ ಸೂಚಿಸುವುದಿಲ್ಲ. ಕೆ.ಎಸ್.ನರಸಿಂಹಸ್ವಾಮಿಯವರ ದುಂಡು ಮಲ್ಲಿಗೆಯು 'ಮೈಸೂರು ಮಲ್ಲಿಗೆ'ಯ ಮಾಲೆಯಲ್ಲಿ ನಿಲ್ಲುವುದಿಲ್ಲ. ಅವರ ಬೆಳವಣಿಗೆಯ ದಾರಿಯೇ ಬೇರೆ.

ನಾನು ಒಲವಿನ ಭಕ್ತ; ಮಲ್ಲಿಗೆ, ಮಾಂದಳಿರು
ಮುಗಿದಿಲ್ಲ ನಾ ಹಿಡಿದ ನಲಿವ ಚಿತ್ರ.
ಹತ್ತು ಸಲ ನಾನು ಕೇಳಿರುವ ನನ್ನೆದೆ ಹಾಡು
ನನಗೆ ನಿನಗೆಲ್ಲರಿಗೆ ಪ್ರೀತಿಪಾತ್ರ. [೫]

-ಎಂದರೂ ಮೈಸೂರು ಮಲ್ಲಿಗೆಯ ವಾಸನೆ ದುಂಡುಮಲ್ಲಿಗೆಗೆಯಿಲ್ಲ. ನರಸಿಂಹಸ್ವಾಮಿಯವರಂತೆ ಇಟ್ಟಣ್ಣವರ ಬೇಗ ಬೇರೆ ದಾರಿ ಕಂಡುಕೊಳ್ಳಲಿಲ್ಲ. 'ಗಾಲಿ ಉಳ್ಳತೈತಿ' ಸಂಕಲನದ ಮೂಲಕ ಸಾಮಾಜಿಕ ಪ್ರಜ್ಞೆ ಪ್ರಕಾಶಿಸಿದರು. 'ಶಾಂತಿ ಚಿಗರಿ'ಯಂಥ ಅಪರೂಪದ ಕವಿತೆ ಕಟ್ಟಿದರು. ಗಾಂಧಿವಾದಕ್ಕೆ ಅತ್ಯಂತ ಸುಂದರ ಹಾಗೂ ಸಮರ್ಪಕವಾದ ಪ್ರತಿಮೆ ರೂಪಿಸಿದರು. ದಟ್ಟ ಕತ್ತಲೆಯಲ್ಲಿಯೂ ಆಶೆಯ ದೀಪ ಹಚ್ಚಿದರು. ಅದರಲ್ಲಿಯೂ ಗಾಲಿಯೊಂದಿಗೆ ಪ್ರೇಮಗೀತೆಗಳು ಉರುಳುತ್ತಲೇ ನಡೆದವು. ಈ ಪ್ರೇಮಗೀತೆಗಳ ಪರಂಪರೆಯ ಮೂರನೇ ಸಂಕಲನ 'ಹಾಡುಣು ಬಾರಃ ಪ್ರೇಮದ ಹಾಡಾ'. ಒಂದು ಏಕತಾನತೆ ನಿರ್ಮಾಣವಾದಾಗ ಪ್ರಗತಿ ನಿಂತುಹೋಗುತ್ತದೆ. ದ್ವಿಪದಿ, ತ್ರಿಪದಿ, ಷಟ್ಪದಿ, ಲಯಗಳೇ ಮತ್ತೆ ಮತ್ತೆ ಬಳಕೆಗೊಳ್ಳುತ್ತವೆ. ಕೆಲವೆಡೆ ಪ್ರಾಸದ ತಾಂತ್ರಿಕ ಕಸರತ್ತು ಕಂಡಿತು.

೪. ಭೂಮಿ ತಾಯಿ ಸಾಕ : ಹೊಳಿಸಾಲ ಬಳ್ಳಿ : ಪುಟ-೧೨
೫. ಮಲ್ಲಿಗೆಯ ಮಾಲೆ : ಮಲ್ಲಿಗೆಯ ಮಾಲೆ : ಪುಟ-೫೩೦

ಸಾದಾ ಪೂಜಿಗೆ ರೂಪಾಯಿ ಐದಾ
ಪತ್ರಿ ಪೂಜಿಗೆ ಬರೆ ಹದಿನೈದಾ
ನೂರಾಐದ ಮಹಾ ಮಂಗಳಾರತಿ
ದೇವರ್ಧೆಸರ ಮ್ಯಾಗ ನಡಿಸ್ಯಾರ ಸಂತಿ. ೧

ಇಂಥಲ್ಲಿ ಸಹಜಪ್ರಾಸ ಕಾಣುವುದಿಲ್ಲ. ಪ್ರಾಸದ ಚೆಲ್ಲಾಟ ಕವಿತೆಯಾಗುವುದಿಲ್ಲ. ಮತ್ತೆ ಕೆಲವೆಡೆಗಳಲ್ಲಿ ಕವಿತೆಗಳು ನಮ್ಮನ್ನು ಅರಳಿಸುವುದಿಲ್ಲ, ನಗಿಸುತ್ತವೆ. 'ಬರತನಂದ ನಲ್ಲಾ ಽ.......' ಕವಿತೆಯ ಸೋಪಜ್ಞತೆ ಉತ್ಕೃಷ್ಟವಾದುದು. 'ಪ್ರೇಮದ ಹಾಡಿ'ನ ಚೆಂದ ಪಾರಿವಾಳ, ಹಾಲುಗಲ್ಲದ ಹುಡುಗಿಯಂಥ ಅತ್ಯುತ್ತಮ ಕವಿತೆಗಳು ರಚಿತಗೊಂಡಿದ್ದರೂ ಅವುಗಳ ಸಂಖ್ಯೆ ಕಡಿಮೆ. ನಲ್ವಾಡುಗಳ ಬೆಣ್ಣಿಯಾಕಿಯಂಥ ಚಿತ್ರಗಳು ಅಪರೂಪ. ಅನಂದಕಂದರ ಚಿತ್ರಕ ಶಕ್ತಿಗೆ ಹೋಲಿಸಿದರೆ ಆ ಸಾಲಿಗೆ ಹೊಂದುವುದಿಲ್ಲ. ಕೃಷ್ಣಶರ್ಮರ ಪ್ರತಿಭಾ ಕುಂಚದ ತುದಿ ತುಂಬ ಸೂಕ್ಷ್ಮ –

ಮೂಗುಬಟ್ಟು ಹಾಕಿದಾಕಿ ಮೂಗಾ–ಕೊರ
ದ್ಹಚ್ಚಿದಾಂಗ ಮಾರೀ ಮ್ಯಾಗಽ
ಹರಳೀನ ಝುಮಿಕಿ ಕಿವಿಯಾಗಽ
ತೂಗ್ಯಾಡಿ ಸುರಿಸತಿತ್ತೋ ಸೊಬಗಾ
ನಾ ಸಂತಿಗೆ ಹೋಗಿನ್ನಿ – ಆಕಿ ತಂದಿದ್ದಳೋ ಬೆಣ್ಣಿ. ೨

'ಮುಂಗುರುಳು ಹಾರ್‍ಯಾಡುವ ಅವಳ ಹಣಿ ಚೆಲ್ವಿಕೆಯ ಖಣಿ, ತಂಬುಲದ ತುಟಿ ನಗಿ ಮಲ್ಲಿಗಿ ತ್ವಾಟಾ'. ಕೆನ್ನೆಯ ಗುಳಿಯ ಮಿಂಚು ಅನನ್ಯವಾದುದು.

........ ಕೆಂಪಾದ ಕೆನ್ನಿ ಕುಣಿ ಕಾಡುವ ಕಾಟವೇ ಬೆಣ್ಣಿಯಾಕೆಯ ಮಾಟ. 'ಹೊಳಿಸಾಲ ಬಳ್ಳಿ'ಯ ಗಜಗೌರಿಯನ್ನು ಬೆಣ್ಣಿಯಾಕೆಯ ಮುಗ್ಧಲಲ್ಲಿ ನಿಲ್ಲಿಸಿ ನೋಡಬಹುದು.

ಇಬ್ಬರದೂ ಜರತಾರಿ ಸೀರೆ. ಆದರೆ ಆನಂದಕಂದರು ಅವಳಿಗೆ ಸೀರೆ ಉಡಿಸುವ ಬಗೆ ವಿಶಿಷ್ಟವೆನಿಸುತ್ತದೆ. ಆ ಕುಸುರಿಗೆಲಸ 'ಹೊಳಿಸಾಲ ಬಳ್ಳಿ'ಯಲ್ಲಿಲ್ಲದಿದ್ದರೂ ಸಪ್ಪೆಯೆನಿಸುವುದಿಲ್ಲ. ಇಬ್ಬರದೂ ಧೋರಣೆ ಮಾತ್ರ ಒಂದೇ– ನಮ್ಮ ನಾಡಿನ ಜನ–ಸಾಮಾನ್ಯರ ನಡೆ–ನುಡಿ, ಸಂಸ್ಕೃತಿಗಳ ವಾಸ್ತವ ಜೀವನ ಚಿತ್ರವನ್ನು ಕಾವ್ಯದಲ್ಲಿ ಮೂಡಿಸುವುದು. ಪರಕೀಯ ಜೀವನದ ಅನುಕರಣದ ಅಭಾಸ ತಡೆಯುವ ಕಾಳಜಿ. "ಕಾವ್ಯಕ್ಕೆ ಹೊಸ ಚೈತನ್ಯ, ಸಾಂದ್ರತೆ ತರುವುದಕ್ಕೆ ಇರುವ ದಾರಿಯೆಂದರೆ ಕಾವ್ಯದಲ್ಲಿ ಬಹುಸಂಖ್ಯಾತ ಜನಸ್ತೋಮದ ವೈವಿಧ್ಯಮಯ, ನಿರ್ದಿಷ್ಟ ಅನುಭವ ಲೋಕವನ್ನು ತರುವುದು. ಬಹುಸಂಖ್ಯಾತ ಜನತೆಯ ಸಂಸ್ಕೃತಿಗಳಿಗೆ, ಜೀವನ ಕ್ರಮಗಳಿಗೆ ಒಳಗಿನವರಾಗಿ ಅಭಿವ್ಯಕ್ತಿಕೊಡಲು ಯತ್ನಿಸುವುದು............. ಬೇಂದ್ರೆ ತಮ್ಮ ಅತ್ಯುತ್ತಮ ಗಳಿಗೆಯಲ್ಲಿ ತಮ್ಮ ಮಾಂತ್ರಿಕತೆ ಸಾಧಿಸಿದ್ದು ಹೀಗೆಯೇ. ನಂತರ ಕಂಬಾರರು ಈ ಲೋಕಗಳನ್ನು ಸಂಧಿಸಿದರು. ತಮ್ಮ ಕಾವ್ಯದಲ್ಲಿ

---

೧. ದೇವರಲ್ಲಿ ಐತಿ : ಗಾಲಿ ಉಳ್ಳತ್ಯತಿ : ಪುಟ–೪೩
೨. ಬೆಣ್ಣಿಯಾಕಿ : ನಲ್ವಾಡುಗಳು : ಪುಟ–೯

ಅದನ್ನು ಆಗಾಗ ಕರೆದುಕೊಂಡರು"[೮] ಕಂಬಾರರಿಗಿಂತ ಮೊದಲು ಬೆಟಗೇರಿ ಕೃಷ್ಣಶರ್ಮ, ಮಧುರ ಚೆನ್ನರು ಆ ಪ್ರಯತ್ನ ಮಾಡಿದ್ದರು. ಬೇಂದ್ರೆಯವರ ತರುವಾಯ ಅದು ಫಲ ಕೊಟ್ಟಿದ್ದು ಕಂಬಾರರಿಗೆ, ಇಮ್ರಾಪೂರ ಹಾಗೂ ಇಟ್ಟಣ್ಣವರ ಸಾಧನೆಗಳನ್ನು ನಿರ್ಲಕ್ಷಿಸುವಂತಿಲ್ಲ. ಹೊಸಗನ್ನಡ ಪ್ರೇಮಕಾವ್ಯಗಳ ಕುರಿತು ಅಧ್ಯಯನ ಕೈಗೊಂಡರೆ ರೋಚಕ ಕೃತಿ ಹೊರಬರುತ್ತದೆ.

ಬೇಂದ್ರೆ ಕೆ.ಎಸ್.ಎನ್. ಆನಂದಕಂದ, ಮಧುರ ಚೆನ್ನ, ಇಮ್ರಾಪೂರ ಕಂಬಾರ, ಇಟ್ಟಣ್ಣವರ ಸಮುದಾಯದ ತೀರ ಹತ್ತಿರ ಹೋದವರು. ಆ ಆಸಕ್ತಿಯನ್ನು ಕೆ.ಎಸ್.ನರಸಿಂಹಸ್ವಾಮಿಯವರು 'ಮಲ್ಲಿಗೆಯ ಮಾಲೆ'ಯ ಮುನ್ನುಡಿಯಲ್ಲಿ ಹಂಚಿಕೊಂಡದ್ದು ಹೀಗೆ–" ಕವಿತೆ ಎಂದರೇನು ? ನನಗೆ ತಿಳಿಯದು. ಕಣ್ಣು ಕಪ್ಪೆಯ ಚಿಪ್ಪಿನಗಲ ದೋಣಿ; ನೋಟ ಸಮುದ್ರದಂಥ ಪ್ರಾಣಿ. ಬರೆಯುತ್ತ ಬರೆಯುತ್ತ ಉತ್ತರ ಹುಡುಕಬೇಕಿದೆ. ನನಗೆ ಕವಿತೆ ಎಂದರೆ ಇಷ್ಟೆ; ಕೆಲವು ಕವನಗಳು. ಕೆಲವು ಗೀತೆಗಳು; ಕೆಲವು ಪ್ರಯತ್ನಗಳು, ಕೆಲವು ಫಲಗಳು; ಕೆಲವು ದೂರದ ಬೆಳಕು, ಕೆಲವು ಹತ್ತಿರದ ದನಿ. "ನನ್ನ ಪರಿಚಯವಿಲ್ಲದ ಅನೇಕರಿಗೆ ನನ್ನ ಕೆಲವು ಕವನಗಳು ಪರಿಚಿತ." ಅವರಲ್ಲಿ ನನ್ನ ಕೆಲವು ಕವನಗಳನ್ನು ಓದಿದವರಿದ್ದಾರೆ. ಬಾನುಲಿಯಲ್ಲೋ ಸಂಗೀತ ಸಭೆಗಳಲ್ಲೋ ಸಿನಿಮಾದಲ್ಲೋ ಕೇಳಿದ ಹಲವರಿದ್ದಾರೆ; ಬಳೆಪೇಟೆಯಲ್ಲಿ ನನ್ನನ್ನು ಕಂಡು ಕಿರುನಗೆ ಬೀರುವ ನವದಂಪತಿಗಳಿದ್ದಾರೆ; ಸಿಟಿಬಸ್ಸಿನಲ್ಲಿ ನನ್ನನ್ನು ಗುರುತಿಸಿ ಸ್ಥಳಮಾಡಿ ಕೊಡುವ ತರುಣ–ತರುಣಿಯರಿದ್ದಾರೆ; ನನ್ನ ಕೆಲವು ಕವನಗಳನ್ನು ಜನಪದ ಗೀತೆಯೆಂದು ಭಾವಿಸಿ ಹಾಡುವವರಿದ್ದಾರೆ; ನನ್ನ ಯಾವುದೋ ಕವನದಲ್ಲಿ ವರ್ಣಿತವಾಗಿರುವ ಅನುಭವ ತಮ್ಮದೆಂದು ತಿಳಿದು ನನ್ನನ್ನು ಸತ್ಕರಿಸಿದವರಿದ್ದಾರೆ............ ನನ್ನ ಅಭಿಮಾನಿ ವೃಂದದಲ್ಲಿ ಧಾರವಾಡದ ಬಸ್–ಸ್ಟ್ಯಾಂಡಿನಲ್ಲಿ ನನ್ನ ಹಾಡನ್ನು ಸ್ವಲ್ಪ ಅದಲು ಬದಲು ಮಾಡಿ ನನಗೇ ಹಾಡಿ ನನ್ನಿಂದ ಪೈಸೆ ಪಡೆದ ಬಡ–ಹುಡುಗನೂ ಸೇರಿದ್ದಾನೆ."[೯]

ಇದು ಕೆ.ಎಸ್. ನರಸಿಂಹಸ್ವಾಮಿಯವರ ಅನುಭವ ಮಾತ್ರವಲ್ಲ ಮೇಲೆ ಉಲ್ಲೇಖಿಸಿದ ಎಲ್ಲ ಕವಿಗಳದು. ರೈಲಿನಲ್ಲಿ ಹೋಗುವಾಗ ಇಟ್ಟಣ್ಣವರ ಮುಂದೆ ಅವರದೇ ಕವಿತೆ ಹಾಡಿ ಅವರಿಂದ ಹಣ ಪಡೆದ ಭಿಕ್ಷುಕರು ಅನೇಕರು. ಜನಪದ ಸಾಹಿತ್ಯ ಬದುಕಿ, ಬೆಳೆದ ರೀತಿ ಈ ಬಗೆಯದು. ಇಟ್ಟಣ್ಣವರ ಹಾಡುಗಳು ಪುಸ್ತಕದಲ್ಲಿರುವುದಕ್ಕಿಂತ ಹೆಚ್ಚು ಸಮುದಾಯದ ಬಾಯಿಯಲ್ಲಿವೆ, ಕಿವಿಗಳಲ್ಲವೆ, ಹೃದಯಗಳಲ್ಲಿವೆ. ಅವರದು ಸಮುದಾಯದ ಸಾಹಿತ್ಯ. ಅದರಲ್ಲಿ ಪ್ರಾಸ ಪ್ರಾದಾನ್ಯತೆಯ ದೋಷವಿರಬಹುದು. ಒಟ್ಟು ಧೋರಣೆಯ ಕೊರತೆಯಿರಬಹುದು. ಪ್ರೇಮ ತತ್ವಕ್ಕಿಂತ ನಾದ–ಲಯಗಳ ಮೋಡಿಯು ಜಾಸ್ತಿಯಿರಬಹುದು. ಹಾಸ್ಯ ಅಧಿಕವಾಗಿ ಕಾವ್ಯ ಕೆಲವಡೆಗಳಲ್ಲಿ ಸೊರಗಿರಬಹುದು. ಆ ನ್ಯೂನ್ಯತೆಗಳೇನೇ ಇದ್ದರೂ ಬೇಂದ್ರೆ ಕೆ.ಎಸ್.ಎನ್. ಕೃಷ್ಣಶರ್ಮರ ಅನಂತರ ಕನ್ನಡ ಸಮುದಾಯಕ್ಕೆ ಹೆಚ್ಚು ಹೆಚ್ಚು ಸಮೀಪದ ಕವಿ ಶ್ರೀರಾಮ ಇಟ್ಟಣ್ಣವರ ಎನ್ನುವುದರಲ್ಲಿ ಎರಡು ಮಾತಿಲ್ಲ.

ಇವರ ಕಾವ್ಯದ ಮಾದರಿಗಳು ಎರಡು–ಒಂದು ಸಹಜ ಕಾವ್ಯ; ಮತ್ತೊಂದು ಕಸಿ ಕಾವ್ಯ. ಪ್ರೇಮ ಗೀತೆಗಳು ಸಹಜ ಕಾವ್ಯಕ್ಕೆ ಮಾದರಿ. ಸಾಮಾಜಿಕ ಕವನಗಳು ಕಸಿ ಕಾವ್ಯಕ್ಕೆ ಮಾದರಿ. 'ಹೊತ್ತು ಮೂಡುವ ಸಮಯ' ಅವರ ಕಸಿ ಕಾವ್ಯ. ಏಕೆಂದರೆ ಇಟ್ಟಣ್ಣವರ ತಮ್ಮ ಸಹಜ ಕಾವ್ಯ ಧೋರಣೆಗೆ ಸಾಂಸ್ಥಿಕ ಚಿಂತನೆಯ ಕಸಿ ಕಟ್ಟುತ್ತಾರೆ. ಕವಿತೆ ಮೂಡುವ ಹೊತ್ತು ವಿಸ್ತರಿಸುತ್ತಾರೆ. ಹಳ್ಳಿಯಿಂದ

೮. ಡಿ.ಆರ್.ನಾಗರಾಜ : ಈಚಿನ ಕನ್ನಡ ಕಾವ್ಯ (ಲೇ): ಕನ್ನಡ ಸಾಹಿತ್ಯ ಮೀಮಾಂಸೆ : ಪುಟ–೩೩೪

೯. ಕೆ.ಎಸ್.ನರಸಿಂಹಸ್ವಾಮಿ : ಮಲ್ಲಿಗೆಯ ಮಾಲೆ : ಮುನ್ನುಡಿ–ಪುಟ–೬ ಮತ್ತು ೭

ಹೊರಬಂದು ನಗರದೊಳಗಿದ್ದು, ಅಲ್ಲಿಯ ಒಳಗುದಿಯ ಅಭಿವ್ಯಕ್ತಿಗೆ ಹೊಸದಾರಿ ಕಂಡುಕೊಳ್ಳುತ್ತಾರೆ. ದಲಿತ–ಬಂಡಾಯದ ನೆಲೆಯಲ್ಲಿ ನಿಲ್ಲಲು ಪ್ರಯತ್ನಿಸುತ್ತಾರೆ. ಆದರೆ ಹೆಜ್ಜೆಗಳು ಗಟ್ಟಿಯಾಗಿಲ್ಲ. ಅವರ ಕವಿತೆಗಳಲ್ಲಿ ಕಾವ್ಯವಿದೆ ; ಪಕ್ಕನೆ ಅರಳುವುದಿಲ್ಲ. ಕವಿತೆಯಲ್ಲಿ ಕಥೆ ಕಥಿಸುತ್ತಾರೆ; ಯಕ್ಕುಂಡಿಯವರಂತೆ ಕಥನ ಕವನ ಮೂಡುವುದಿಲ್ಲ. ಆದರೆ ಈ ಕವಿಯ ಕಾವ್ಯದ ಒಟ್ಟು ಸ್ವರೂಪ–ಮೌಲ್ಯ–ಸ್ಥಾನ ಈಗಲೇ ನಿರ್ಧರಿಸಲು ಸಾಧ್ಯವೇ ಇಲ್ಲ. 'ಹೊತ್ತು ಮೂಡುವ ಸಮಯ'ದಲ್ಲಿಯ ಅನೇಕ ಕವನಗಳು ಮನಸೆಳೆಯುತ್ತವೆ. "ಜೀವನದಲ್ಲಿ ಅಪಾರ ವಿಶ್ವಾಸವಿದೆ, ಬದುಕಿನಲ್ಲಿ ಅದಮ್ಯ ಪ್ರೀತಿಯಿದೆ, ಏಕತೆ, ಅಖಂಡತೆ, ಕೋಮು ಸಾಮರಸ್ಯ, ಮಾನವೀಯ ಮೌಲ್ಯಗಳ ಪ್ರತಿಪಾದನೆ, ಕಾವ್ಯದಲ್ಲಿ ಹಾಸುಹೊಕ್ಕಾಗಿದೆ. ಸಮಾಜ ವೈಪರೀತ್ಯಗಳಿಂದ ತುಂಬಿಹೋಗಿದ್ದರೂ ಕವಿ ರೋಸಿ ಹೋಗಿ ಸಿನಿಕನಾಗಿ ಬದುಕಿಗೆ ವಿಮುಖವಾಗಿಲ್ಲದಿರುವುದು ಮಹತ್ತರ ವಿಚಾರ."೧೦

ಶ್ರೀರಾಮ ಇಟ್ಟಣ್ಣವರ ಬದುಕು ಅವರ ಕಾವ್ಯಕ್ಕಿಂತಲೂ ದೊಡ್ಡದು. ಕಾವ್ಯ ಮತ್ತು ಬದುಕು ಬೇರೆ ಬೇರೆಯೆಂದು ಅವರು ಭಾವಿಸಿಯೇ ಇಲ್ಲ. ಅದಕ್ಕಾಗಿ ಅವರಲ್ಲಿ ಅಪಾರ ಭರವಸೆ. ಅವರ ಕಾವ್ಯದ ತುಡಿತವೇ ಪ್ರೀತಿ.

**ಒಲವು ತುಂಬಿದ ನಲ್ಲ**
**ನಲ್ಲೆಯ ಕೆನ್ನೆ ಸವರಿದರೆ**
**ಬಾನಲ್ಲಿ ಮಿಂಚು ಕೊರೈಸುವುದು**
..........................................................

**ಪ್ರೀತಿಯ ಗುರು**
**ಶಿಷ್ಯನ ಬೆನ್ನು ತಟ್ಟಿದರೆ**
**ಹೊಳೆ ತುಂಬಿ ಹರಿವುದು.** ೧೧

ಅವರ ಜೀವನ ಪ್ರೀತಿ ಅಗಣಿತ, ಅಮೂಲ್ಯ. ಅದಕ್ಕೆ ಹೃದಯ ಸ್ಪರ್ಶಿಸುವ ತಾಕತ್ತಿದೆ. ಆದ್ದರಿಂದಲೇ ಜನಪದರ ಭಾಷೆಯನ್ನು ಯಥಾವತ್ತಾಗಿ ಅವರು ಕಾವ್ಯದಲ್ಲಿ ಬಳಸಲು ಸಾಧ್ಯವಾಯಿತು. ಇಟ್ಟಣ್ಣವರ ಬದುಕು–ಕಾವ್ಯ–ಪ್ರೀತಿಗಳನ್ನು ಬೇರೆಬೇರೆಯಾಗಿಟ್ಟು ನೋಡಬಾರದು; ಜೊತೆ ಜೊತೆಯಾಗಿಯೇ ತೂಗಬೇಕು. ಇಂದಿನ ಕನ್ನಡ ಕಾವ್ಯದ ನಿರೀಕ್ಷೆಗಳಲ್ಲಿ ಇವರೂ ಒಬ್ಬರು. ದಲಿತ–ಬಂಡಾಯದ ಗಾಳಿಯಲ್ಲಿ ಇಟ್ಟಣ್ಣವರ ಕಾವ್ಯ ವಸ್ತುನಿಷ್ಠ ಚರ್ಚೆಗೆ ಒಳಗಾಗಲಿಲ್ಲ. 'ಜನಪ್ರೀಯ ಕವಿ' ಎಂಬ ಹಣೆಪಟ್ಟಿ ಕಟ್ಟಿ ಕೈತೊಳೆದುಕೊಳ್ಳುವ ವಿಮರ್ಶೆಗಿಂತಲೂ ತಲಸ್ಪರ್ಶಿ ಅಧ್ಯಯನ ಹೊರಬರಬೇಕು. ನಗರದ ಕವಿಗಳು ಬೇಗ ವಿಮರ್ಶಕರ ಕಣ್ಣಿಗೆ ಬೀಳುವರು. ಬೀಳಗಿಯಂಥ ನಗರವೂ ಅಲ್ಲದ; ಗ್ರಾಮವೂ ಅಲ್ಲದ ಪಟ್ಟಣದಲ್ಲಿರುವ ಇಟ್ಟಣ್ಣವರು ವಿಮರ್ಶೆಯ ಉಪೇಕ್ಷೆಗೆ ಒಳಗಾದುದು ಸಾರಸ್ವತದ ಚಿಂತೆ. ಅದಕ್ಕಾಗಿ ಅವರ ಕಾವ್ಯದೊಳಗಿನ ಪ್ರೀತಿಯ ಹಿರಿಹೊಳೆಯನ್ನು ದರ್ಶಿಸುವ ಪ್ರಯತ್ನವಿದು. ಇದರೊಂದಿಗೆ ಅವರ ಸಮಗ್ರ ಸಾಹಿತ್ಯದ ಅಧ್ಯಯನದ ಅಗತ್ಯವಿದೆ.

---

೧೦. ಡಾ. ನರೋಡೆ : **ಹೊತ್ತು ಮೂಡುವ ಸಮಯ** (ಲೇ) : ಅಕ್ಷರ : ಪುಟ–೪

೧೧. ಸ್ಪರ್ಶ : **ಹೊತ್ತು ಮೂಡುವ ಸಮಯ** : ಪುಟ–೩

ಶ್ರೀರಾಮ ಇಟ್ಟಣ್ಣವರ ಕಾವ್ಯದ ಜೊತೆಗೆ ಕವಿಗಳನ್ನು ಸೃಷ್ಟಿಸಿದರು. ಬೀಳಗಿ ಪರಿಸರದಲ್ಲಿ ಕಾವ್ಯದ ಪರಿಸರ ನಿರ್ಮಿಸಿದರು. ಈ ನಾಡಿನ ಭರವಸೆಯ ಬಂಡಾಯ ಕವಿ ಸತ್ಯಾನಂದ ಪಾತ್ರೋಟ ಬೆಳೆದದ್ದು ಇಟ್ಟಣ್ಣವರ ಕಾವ್ಯದ ಗರಡಿಯಲಿ. ಬೀಳಗಿ ಸಿದ್ದಪ್ಪ ಬಿದರಿ ಆಶು ಕವಿ. ಆತ ಅಶಿಕ್ಷಿತ, ಕೃಷಿ ಕಾರ್ಮಿಕ, ನಿಂತಲ್ಲೆ ಕವಿತೆ ಹೊಸೆಯಬಲ್ಲ ಕೋವಿದ.

"ಸಿದ್ದಪ್ಪ ಬಿದರಿ ತೀರಾ ಕಡಿಮೆ ಓದಿದ, ಶ್ರೀರಾಮ ಇಟ್ಟಣ್ಣವರ ಗರಡಿಯಲ್ಲಿ ಪಳಗಿದ, ಅವರಿಂದ ದಟ್ಟವಾಗಿ ಪ್ರಭಾವಿತ, ಪ್ರೇರಿತವಾದ ಮಣ್ಣಿನ ಮಗ."[೧೨] ಇಟ್ಟಣ್ಣವರ ಕಾವ್ಯ 'ಹೊಳಿಸಾಲ ಬಳ್ಳಿ'ಯಾದರೆ ಇವನದು 'ಹೊಳಿಸಾಲ ಹೋರಿ'. ಮತ್ತೊಂದು ಸಂಕಲನ 'ಅನುಭವದ ಅಡಿಗಿ'. ಇವರಿಂದ ಪ್ರೇರಣೆ ಪಡೆದ ಇನ್ನೊಬ್ಬ ಕವಿ ಸವದಿ ಸಿದ್ದಣ್ಣ. ಇಂಥಹ ಅನೇಕ ಕವಿಗಳನ್ನು ನಿರ್ಮಿಸಿ ಬೀಳಗಿಯಲ್ಲಿ ಕವಿಬನ ಬೆಳೆಸಿದರು. ಅವರು ಆಲವಾಗಿ ಹಬ್ಬಲಿಲ್ಲ ; ಬಾಳೆಗಿಡವಾಗಿ ಬೆಳೆದರು. ತಮ್ಮೊಂದಿಗೆ ಕಾವ್ಯ ಪರಿಸರ ನಿರ್ಮಿಸಿದರು.

"ವಿದ್ಯಾರ್ಥಿ ದೆಸೆಯಿಂದಲೇ ಬರೆಯುವುದರಲ್ಲಿ, ಹಾಡುವುದರಲ್ಲಿ ತೊಡಗಿದ ಶ್ರೀರಾಮ ಇಟ್ಟಣ್ಣವರ ಇಂದಿಗೂ ಬರೆಯುತ್ತಲೇ ಇದ್ದಾರೆ. ಅವರೊಬ್ಬ ಜಾನಪದ ವಿದ್ವಾಂಸರೂ ಹೌದು. ಕಾವ್ಯ-ಪಾಂಡಿತ್ಯಗಳು ಜೊತೆ ಜೊತೆಯಾಗಿ ಹೋಗುವುದು ಅಪರೂಪದ ಸಂಗತಿ. ಇವೆರಡರ ಹದವಾದ ಬೆರಕೆಯನ್ನು ಅವರಲ್ಲಿ ಕಾಣುತ್ತೇವೆ. ಎಂತಹ ಗಂಭೀರ, ವೈಚಾರಿಕ ವಿಷಯಗಳನ್ನು ಜಾನಪದ ಗತ್ತಿನಲ್ಲಿಯೇ ಕಾವ್ಯವನ್ನಾಗಿಸುವ ಕಲೆ ಅವರಿಗೆ ಕರಗತವಾಗಿದೆ. ಜನಸಾಮಾನ್ಯರನ್ನು ತಲುಪುವಲ್ಲಿ ಅವರ ಕಾವ್ಯ ಸಫಲವಾಗಿದೆ, ಅನನ್ಯವಾಗಿದೆ."[೧೩] ಅವರ ಸಾಂಸ್ಕೃತಿಕ ವ್ಯಕ್ತಿತ್ವದ ಮೌಲ್ಯಮಾಪನದಷ್ಟು ಸುಲಭವಾಗಿ ಅವರ ಕಾವ್ಯದ ಮೌಲ್ಯಮಾಪನ ಸಧ್ಯಕ್ಕೆ ಸುಲಭವಾಗುದಿಲ್ಲ. ಇಟ್ಟಣ್ಣವರ ನಮ್ಮ ಜನಪ್ರಿಯ ಕವಿಗಳ ಸಾಲಿನಲ್ಲಿ ಮುಂಚೂಣಿಯಲ್ಲಿ ನಿಲ್ಲುವುದು ಸ್ಪಷ್ಟ. ಅವರ ಕಾವ್ಯಕ್ಕೆ ಹಲವು ಮಿತಿಗಳಿರಬಹುದು. ಆದರೆ ಅವರು ಮಿತಿಮೀರಿದ ಜನಪ್ರಿಯತೆಯ, ಜಾನಪದ ಸೌಂದರ್ಯದ ಪ್ರೀತಿಯ ಕವಿ ಎಂಬುದು ಸುಸ್ಪಷ್ಟ.

---

೧೨. ಡಾ. ಮಹಾದೇವ ಕಣವಿ : ಗ್ರಾಮೀಣ ಸಂವೇದನೆ : ಪುಟ-೨೬

೧೩. ಅದೇ.



ಕರ್ನಾಟಕ ನಾಟಕ ಅಕಾಡೆಮಿ ಫೆಲೋಷಿಫ್ ಪಡೆದ ಸಂದರ್ಭ



ಜಾನಪದ ತಜ್ಞ ಪ್ರಶಸ್ತಿ ಪ್ರದಾನ



ಉಡುಪಿಯಲ್ಲಿ ಜರುಗಿದ ಅ.ಭಾ.ಕ.ಸಾ. ಸಮ್ಮೇಳನದಲ್ಲಿ ಗೌರವ ಸನ್ಮಾನ

## ಅನುಬಂಧ - ೧

## ಡಾ. ಶ್ರೀರಾಮ ಇಟ್ಟಣ್ಣವರ ಕೃತಿಗಳು

ಕಾವ್ಯ :

೧. ಹೊಳಿಸಾಲ ಬಳ್ಳಿ (೧೯೭೩)

೨. ಹಾಡುಣು ಬಾರs ಪ್ರೇಮದ ಹಾಡಾ (೧೯೯೧)

೩. ಗಾಲಿ ಉಳ್ಳತ್ತೈತಿ (೧೯೮೭)

೪. ನೂರು ಶಿಶುಗೀತೆಗಳು (೧೯೯೫)

೫. ಹೊತ್ತು ಮೂಡುವ ಸಮಯ (೨೦೦೧)

ನಾಟಕ :

೧. ಪಾರಿಜಾತದವರು (೧೯೯೦)

ವಿಮರ್ಶೆ :

೧. ಸೃಜನ–ವಿಧಾನ (೨೦೦೪)

ಸಂಶೋಧನೆ :

೧. ಲಾವಣಿ (೧೯೮೫)

೨. ಶ್ರೀ ಕೃಷ್ಣ ಪಾರಿಜಾತ ಒಂದು ಅಧ್ಯಯನ (೧೯೯೧)

೩. ಸಣ್ಣಾಟ (೧೯೯೪)

೪. ಹಲಗಲಿ ಗ್ರಾಮ ಜಾನಪದ (೧೯೯೫)

೫. ಕೊಣ್ಣೂರು ಶ್ರೀ ಕರಿಸಿದ್ಧೇಶ್ವರ ದೇವಸ್ಥಾನ (೧೯೯೫)

೬. ಜಾನಪದ ಪರಿಕ್ರಮ (೨೦೦೭)

ಜೀವನ ಚರಿತ್ರೆ :

೧. ಜಾನಪದ ಪಶುವೈದ್ಯ ಬೀಳಗಿ ಸಿದ್ಧಪ್ಪ (೧೯೯೦)

೨. ಕೌಜಲಗಿ ನಿಂಗವ್ವ (೧೯೯೬)

೩. ಸೀತಾಬಾಯಿ ತಮಸಾನಿ (೨೦೦೦)

ಸಂಪಾದನೆ :

೧. ಕಟ್ಟಿಚೆನ್ನ

೨. ಕಂದಗಲ್ಲ ಸ್ಮೃತಿ (೧೯೯೫)

೩. ವಾತ್ಸಲ್ಯ (೧೯೯೬)

೪. ಸಮದೃಷ್ಟಿ (೨೦೦೬)

ಸಹಸಂಪಾದನೆ :

೧. ಕಡಗೋಲ

೨. ಹಾಲಕೆನೆ

೩. ಜಾನಪದ ಹಾಡುಗಳು

೪. ನಂದಾದೀಪ

೫. ಕಲ್‌ಸಕ್ಕರಿ

೬. ದೀಪಸ್ತಂಭ

೭. ಕ್ಯಾದಗಿ

## ಅನುಬಂಧ – ೨

# ಡಾ. ಶ್ರೀರಾಮ ಇಟ್ಟಣ್ಣವರಿಗೆ ದೊರೆತ ಪ್ರಶಸ್ತಿ /ಪುರಸ್ಕಾರಗಳು

೧. ೧೯೯೪ : ಕರ್ನಾಟಕ ನಾಟಕ ಅಕಾಡೆಮಿಯಿಂದ ಫೆಲೋಶಿಫ್

೨. ೧೯೯೫-೯೮ : ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಸದಸ್ಯ

೩. ೧೯೯೬-೯೭ : ಉತ್ತಮ ಉಪನ್ಯಾಸಕ ಪ್ರಶಸ್ತಿ (ಬೆಳಗಾವಿ ವಿಭಾಗ ಪ.ಪೂ.ಶಿ. ಇಲಾಖೆ)

೪. ೧೯೯೬-೯೮ : ಧಾರವಾಡ ಆಕಾಶವಾಣಿ ಕೇಂದ್ರ ; ಜನಪದ ಸಂಗೀತ ಸಲಹಾ ಸಮಿತಿ ಸದಸ್ಯ

೫. ೨೦೦೨ : ಮೇಘಮಿತ್ರ ಸಾಹಿತ್ಯ ಪುರಸ್ಕಾರ

೬. ೨೦೦೨ : ಅಣ್ಣಾರಾಯ ಕುಲಕರ್ಣಿ ಕಾವ್ಯ ಪ್ರಶಸ್ತಿ (ಹೊತ್ತು ಮೂಡುವ ಸಮಯ-ಸಂಕಲನಕ್ಕೆ)

೭. ೨೦೦೨ : ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯಿಂದ ಜಾನಪದ ತಜ್ಞ ಪ್ರಶಸ್ತಿ

೮. ೨೦೦೨ : ಡಾ. ಸಿಂಪಿ ಲಿಂಗಣ್ಣ ಸ್ಮಾರಕ ಅಧ್ಯಯನ ಕೇಂದ್ರ ಪ್ರಶಸ್ತಿ

೯. ೨೦೦೬ : ಸರ್ವಾಧ್ಯಕ್ಷತೆ, ಬೆಳಗಾವಿ ಜಿಲ್ಲಾ ೫ನೆಯ ಕನ್ನಡ ಸಾಹಿತ್ಯ ಸಮ್ಮೇಳನ-ಹಾರೂಗೇರಿ

೧೦. ೨೦೦೭ : ಗೌರವ ಸನ್ಮಾನ ; ೭೪ನೆಯ ಅಖಿಲ ಭಾರತ ಕ.ಸಾ. ಸಮ್ಮೇಳನ – ಉಡುಪಿ

೧೧. ೨೦೦೮ : ಗೌರವ ಸನ್ಮಾನ ; ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಳ್ಳಿ ಹಬ್ಬ

೧೨. ೨೦೦೮ : ಸದಸ್ಯ, ಹಾಲು ಮತ ಅಧ್ಯಯನ ಪೀಠ ಕನ್ನಡ ವಿಶ್ವವಿದ್ಯಾಲಯ – ಹಂಪಿ

# ಅನುಬಂಧ – 3

## ಆಕರ ಗ್ರಂಥಗಳು


| ಕ್ರ.ಸಂ | ಕೃತಿ | ಲೇಖಕರು | ಪ್ರಕಾಶನ | ಪ್ರ. ವರ್ಷ |
|---|---|---|---|---|
| ೧ | ಅಕ್ಕರ | ಸಂ : ವಿಜಯಕುಮಾರ ಕಟಗಿಹಳ್ಳಿಮಠ | ಕನ್ನಡ ಪುಸ್ತಕ ಪರಿಷತ್ತು, ಬಾಗಲಕೋಟೆ | ೨೦೦೨ |
| ೨ | ಇಂಚರ (ಡಾ|| ಎಸ್. ಡಿ. ಇಂಚಲರ ಸಮಗ್ರ ಕಾವ್ಯ) | ಸಂ : ಬಿ.ಎಸ್. ಗವಿಮಠ | ಕನ್ನಡ ಜಾಗೃತಿ ಪುಸ್ತಕ ಮಾಲೆ, ಚಿಂಚಣಿ. (ಜಿ|| ಬೆಳಗಾವಿ) | ೨೦೦೨ |
| ೩ | ಒಲವೇ ನಮ್ಮ ಬದುಕು (ಅಂಬಿಕಾತನಯದತ್ತ) | ಸಂ : ವಾಮನ ಬೇಂದ್ರೆ | ಗೀತಾಬುಕ್ ಹೌಸ್, ಮೈಸೂರು | ೧೯೮೬ (ಚ.ಮು) |
| ೪ | ಕಣವಿಯವರ ಕವಿತೆ : ಒಂದು ಹೊಸ ಓದು | ಸಂ : ಗುರುಲಿಂಗ ಕಾಪಸೆ ಜಿ. ಎಂ. ಹೆಗಡೆ | ಸುಮುಖ ಪ್ರಕಾಶನ, ಬೆಂಗಳೂರು | ೨೦೦೮ |
| ೫ | ಕನ್ನಡ ಕಾವ್ಯತತ್ವ ಚಿಂತನೆ | ಜಿ. ಎಸ್. ಶಿವರುದ್ರಪ್ಪ | ಕ.ವಿ.ವಿ.ಹಂಪಿ | ೨೦೦೧ |
| ೬ | ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಪ್ರತಿ ಸಂಸ್ಕೃತಿ | ಎಸ್. ಎಮ್. ಮುತ್ತಯ್ಯ | ಕ.ಸಾ.ಪ.ಬೆಂಗಳೂರು | ೨೦೦೮ |
| ೭ | ಕನ್ನಡ ನಾಟಕ ಮತ್ತು ವಾಸ್ತವತೆ | ಬಸವರಾಜ ಡೋಣೂರ | ಕ.ಸಾ.ಪ.ಬೆಂಗಳೂರು | ೨೦೦೮ |
| ೮ | ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಗಳು | ವಿವಿಧ ಲೇಖಕರು | ಕ.ಸಾ.ಪ.ಬೆಂಗಳೂರು | ೨೦೦೬ |
| ೯ | ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ | ವಿವಿಧ ಲೇಖಕರು | ಕ.ಸಾ.ಪ.ಬೆಂಗಳೂರು | ೨೦೦೬ |
| ೧೦ | ಕನ್ನಡ ಸಾಹಿತ್ಯ ಮತ್ತು ಮಹಿಳೆ | ಸಂ : ಸ್ನೇಹಾ ಭೂಮಿಗೌಡ ಮಲ್ಲಿಕಾ ಘಂಟಿ | ಕ.ಸಾ.ಪ.ಬೆಂಗಳೂರು | ೨೦೦೬ |
| ೧೧ | ಕನ್ನಡ ಸಾಹಿತ್ಯ ಮೀಮಾಂಸೆ | ಸಂ : ರಹಮತ್ ತರೀಕೆರೆ | ಕ.ವಿ.ವಿ.ಹಂಪಿ | ೨೦೦೧ |

| ಕ್ರ.ಸಂ | ಕೃತಿ | ಲೇಖಕರು | ಪ್ರಕಾಶನ | ಪ್ರ. ವರ್ಷ |
|---|---|---|---|---|
| ೧೨ | ಕಾವ್ಯ ಭಾಷೆ | ಎಂ. ಎಚ್. ಕೃಷ್ಣಯ್ಯ | ಅಂಕಿತ ಪ್ರಕಾಶನ, ಬೆಂಗಳೂರು | ೨೦೦೦ |
| ೧೩ | ಕಾವ್ಯಾರ್ಥ ಚಿಂತನ | ಜಿ. ಎಸ್. ಶಿವರುದ್ರಪ್ಪ | ಶಾರದಾ ಪ್ರಕಾಶನ, ಬೆಂಗಳೂರು | ೧೯೮೩ |
| ೧೪ | ಕಾವ್ಯದಲ್ಲಿ ಪ್ರತಿಮಾ ಸಂವಿಧಾನ | ಜೀವಿ ಕುಲಕರ್ಣಿ ಎ. ವ್ಹಿ. ಗೋಕಾಕ | ಹರ್ಷವರ್ಧನ ಪ್ರಕಾಶನ, ಮುಂಬೈ | ೧೯೯೯ |
| ೧೫ | ಕುವೆಂಪು : ಒಂದು ಪುನರನ್ವೇಷಣ | ಸಂ : ಡಿ. ಎಸ್. ನಾಗಭೂಷಣ | ಲೋಹಿಯಾ ಪ್ರಕಾಶನ, ಬಳ್ಳಾರಿ | ೨೦೦೫ |
| ೧೬ | ಕೃಷ್ಣಾ ತೊರೆ (ಭುಜೇಂದ್ರ ಮಹಿಷವಾಡಿ ಸಮಗ್ರ ಕಾವ್ಯ) | ಸಂ : ಪಿ.ಜಿ. ಕೆಂಪಣ್ಣವರ | ಕನ್ನಡ ಜಾಗೃತಿ ಪುಸ್ತಕ ಮಾಲೆ, ಚಿಂಚಣಿ (ಜಿ॥ ಬೆಳಗಾವಿ) | ೨೦೦೬ |
| ೧೭ | ಕೆ. ಎಸ್. ನರಸಿಂಹಸ್ವಾಮಿ | ಜಿ. ರಾ. ಗೋವಿಂದರಾಜು | ಕ.ವಿ.ವಿ.ಹಂಪಿ | ೧೯೯೫ |
| ೧೮ | ಗಾಲಿ ಉಳ್ಳತೈತಿ | ಶ್ರೀರಾಮ ಇಟ್ಟಣ್ಣವರ | ವಿನಿ ಪ್ರಕಾಶನ, ಬೀಳಗಿ (ಜಿ॥ ಬಾಗಲಕೋಟ) | ೨೦೦೮ |
| ೧೯ | ಟಿ. ಪಿ. ಕೈಲಾಸಂ ಅವರ ಸಾಮಾಜಿಕ ನಾಟಕಗಳು | ಆರ್. ಮೋಹನ ಕುಮಾರ | ಕ.ಸಾ.ಪ.ಬೆಂಗಳೂರು | ೨೦೦೮ |
| ೨೦ | ದು. ನಿಂ. ಬೆಳಗಲಿ ಬದುಕು ಬರಹ : ಒಂದು ಅಧ್ಯಯನ | ಎಸ್. ಬಿ. ಮಟೋಳಿ | ವಿಮೋಚನ ಪ್ರಕಾಶನ, ಅಥಣಿ | ೨೦೦೬ |
| ೨೧ | ದೇವನ ಮನೆ | ಸಂ : ಬಿ. ಆರ್. ಪೋಲೀಸ ಪಾಟೀಲ | ಸ್ನೇಹ ಪಂಪದ ಪ್ರಕಾಶನ, ಬನಹಟ್ಟಿ (ಜಿ॥ ಬಾಗಲಕೋಟ) | ೧೯೯೮ |
| ೨೨ | ನಲ್ವಾಡುಗಳು | ಆನಂದ ಕಂದ | ಸಮಾಜ ಪುಸ್ತಕಾಲಯ, ಧಾರವಾಡ | ೧೯೯೦ (ಪ.ಮು) |

| ಕ್ರ.ಸಂ | ಕೃತಿ | ಲೇಖಕರು | ಪ್ರಕಾಶನ | ಪ್ರ. ವರ್ಷ |
|---|---|---|---|---|
| ೨೩ | ಪುಸ್ತಕಾವಲೋಕನ | ಧನವಂತ ಹಾಜವಗೋಳ | ಮಹಾದೇವಿ ಪ್ರಕಾಶನ, ಧಾರವಾಡ. | ೨೦೦೮ |
| ೨೪ | ಬಂಡಾಯ ಸಾಹಿತ್ಯ | ಬಸವರಾಜ ಸಬರದ | ಕ.ವಿ.ವಿ. ಹಂಪಿ | ೨೦೦೧ |
| ೨೫ | ಬ. ಗಿ. ಯಲ್ಲಟ್ಟಿ ಸಮಗ್ರ ಕಾವ್ಯ | ಬ. ಗಿ. ಯಲ್ಲಟ್ಟಿ | ವಾತ್ಸಲ್ಯ ಪ್ರಕಾಶನ, ಬನಹಟ್ಟಿ. (ಜಿ॥ ಬಾಗಲಕೋಟ) | ೨೦೦೧ |
| ೨೬ | ಬ. ಗಿ. ಯಲ್ಲಟ್ಟಿ ಸಮಗ್ರ ಸಾಹಿತ್ಯ | ಆರ್. ಬಿ. ಚಿಲಮಿ | ಶ್ರೀ ವೀರಭದ್ರೇಶ್ವರ ಪ್ರಕಾಶನ, ಹಾರೂಗೇರಿ (ಜಿ॥ ಬೆಳಗಾವಿ) | ೨೦೦೬ |
| ೨೭ | ಬೇವು ಬೆಲ್ಲ | ಸೋಮಶೇಖರ ಇಮ್ರಾಪೂರ | ಸಾಹಿತ್ಯ ಭಂಡಾರ, ಹುಬ್ಬಳ್ಳಿ | ೧೯೯೦ |
| ೨೮ | ಮಲ್ಲಿಗೆಮಾಲೆ | ಕೆ.ಎಸ್. ನರಸಿಂಹಸ್ವಾಮಿ | ಲಿಪಿ ಪ್ರಕಾಶನ, ಬುಗಳೆ ರಸ್ತೆ, ಬಸವನ ಗುಡಿ, ಬೆಂಗಳೂರು | ೧೯೯೪ |
| ೨೯ | ಮಿರ್ಜಿ ಅಣ್ಣಾರಾಯರು : ಒಂದು ಅಧ್ಯಯನ | ಶಿವಾನಂದ ಗಾಳಿ | ಸುಂದರ ಪ್ರಕಾಶನ, ಧಾರವಾಡ | ೧೯೯೫ |
| ೩೦ | ಯುಗದ ಕವಿ ಕುವೆಂಪು ಜೀವನ ಮತ್ತು ಸಾಹಿತ್ಯ ಸಾಧನ | ಕೆ. ಸಿ. ಶಿವಾರೆಡ್ಡಿ | ಪುಸ್ತಕ ಪ್ರಕಾಶನ, ಮೈಸೂರು | ೨೦೦೨ |
| ೩೧ | ವಿಜಾಪುರ ಜಿಲ್ಲೆಯ ಲಾವಣಿಮೇಳಗಳು | ನಿಜಲಿಂಗಪ್ಪ ಮಟ್ಟಿಹಾಳ | ಬೆಳಗು ಪ್ರಕಾಶನ, ನಾಗರದಿನ್ನಿ | ೨೦೦೧ |
| ೩೨ | ಶತಮಾನದ ಕಾವ್ಯ | ಸಂ : ಎಚ್. ಎಸ್. ವೆಂಕಟೇಶ ಮೂರ್ತಿ | ಕ.ಸಾ.ಅ.ಬೆಂಗಳೂರು | ೨೦೦೧ |
| ೩೩ | ಸಖೀಗೀತ | ಸಂ : ವಾಮನ ಬೇಂದ್ರೆ | ಶ್ರೀಮಾತಾ ಪ್ರಕಾಶನ, ಧಾರವಾಡ | ೧೯೯೦ |

| ಕ್ರ.ಸಂ | ಕೃತಿ | ಲೇಖಕರು | ಪ್ರಕಾಶನ | ಪ್ರ. ವರ್ಷ |
|---|---|---|---|---|
| ೩೪ | ಸಂಸ್ಕೃತಿ-ಶ್ರಮ ಮತ್ತು ಸೃಜನಶೀಲತೆ | ಬರಗೂರು ರಾಮಚಂದ್ರಪ್ಪ | ಅಂಕಿತ ಪ್ರಕಾಶನ, ಬೆಂಗಳೂರು | ೨೦೦೧ |
| ೩೫ | ಹಾಡುಣು ಬಾರs ಪ್ರೇಮದ ಹಾಡಾ | ಶ್ರೀರಾಮ ಇಟ್ಟಣ್ಣವರ | ದ್ರುವರಂಗ ಹುನಗುಂದ (ಜಿ॥ ಬಾಗಲಕೋಟ) | ೧೯೯೧ |
| ೩೬ | ಹೊತ್ತು ಮೂಡುವ ಸಮಯ | ಶ್ರೀರಾಮ ಇಟ್ಟಣ್ಣವರ | ವಿನಿ ಪ್ರಕಾಶನ, ಬೀಳಗಿ (ಜಿ॥ ಬಾಗಲಕೋಟ) | ೨೦೦೧ |
| ೩೭ | ಹೊಳಿಸಾಲ ಬಳ್ಳಿ | ಶ್ರೀರಾಮ ಇಟ್ಟಣ್ಣವರ | ಶ್ರೀರಾಮ ಇಟ್ಟಣ್ಣವರು ಬೀಳಗಿ (ಜಿ॥ ಬಾಗಲಕೋಟ) | ೧೯೯೩ (ಮೂರನೇ ಮುದ್ರಣ) |

